

ಕರ್ನಾಟಕ ಸರ್ಕಾರ

# ನುಡಿ ಕನ್ನಡ

## ತೃತೀಯ ಭಾಷಾ ಕನ್ನಡ ಪಠ್ಯಪುಸ್ತಕ

(ಪರಿಷ್ಕೃತ)






## ಆರನೆಯ ತರಗತಿ

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)

ನಂ. ೪, ೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ಮೂರನೆಯ ಹಂತ,
ಬೆಂಗಳೂರು – ೫೬೦೦೮೫

## ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು :**

**ಶ್ರೀ ಬಿದರಹಳ್ಳಿ ಕೃಷ್ಣಮೂರ್ತಿ,** ಪ್ರಾಂಶುಪಾಲರು, ಸರ್ವಸೇವಾ ಬೋಧಕ ಶಿಕ್ಷಣಾಲಯ, ಶಿಕ್ಷಕರ ತರಬೇತಿ ಸಂಸ್ಥೆ, ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ.

**ಸದಸ್ಯರು :**

**ಶ್ರೀ ವಿ. ರಾಜು,** ಕನ್ನಡ ಅಧ್ಯಾಪಕರು, ನ್ಯಾಷನಲ್ ಹೈಸ್ಕೂಲ್, ಬಸವನಗುಡಿ, ಬೆಂಗಳೂರು-೦೪.

**ಶ್ರೀಮತಿ ರೋಹಿಣಿ ಶಶಿಕಾಂತ್ ದಾನಿ,** ಸಹ ಶಿಕ್ಷಕರು. ಸರ್ಕಾರಿ ಉರ್ದು ಹಿರಿಯ ಪ್ರಾಥಮಿಕ ಶಾಲೆ, ರಬಕವಿ ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ.

**ಶ್ರೀಮತಿ ಲಲಿತ ವೈ ಎನ್,** ಸಹ ಶಿಕ್ಷಕರು. ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಕಾಚಿಕೆರೆ ಕ್ಯಾಂಪ್, ಶೆಟ್ಟಿಹಳ್ಳಿ, ಶಿವಮೊಗ್ಗ ತಾಲ್ಲೂಕು.

**ಶ್ರೀಮತಿ ತ್ರಿವೇಣಿ .ಎಂ,** ಸಹ ಶಿಕ್ಷಕರು. ಸರ್ಕಾರಿ ಕಿರಿಯ ಪ್ರಾಥಮಿಕಶಾಲೆ, ಗುಡ್ರುಕೊಪ್ಪ, ಶೆಟ್ಟಿಹಳ್ಳಿ, ಶಿವಮೊಗ್ಗ ತಾಲ್ಲೂಕು.

**ಶ್ರೀ ಜಿ.ಎಂ. ಜಂಗಿ (ರ.ಬನಹಟ್ಟಿ),** ಕಲಾವಿದರು, ಡಿ.ಎಸ್.ಇ.ಆರ್.ಟಿ, ಬೆಂಗಳೂರು.

**ಪರಿಶೀಲಕರು :**

**ಡಾ. ಪಿ. ಮಹದೇವಯ್ಯ,** ಸಹ ಪ್ರಾಧ್ಯಾಪಕರು, ಕನ್ನಡಭಾಷಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

**ಸಂಪಾದಕ ಮಂಡಳಿ ಸದಸ್ಯರು :**

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ ನಗರ, ಬೆಂಗಳೂರು

**ಡಾ.ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ. ೧೩೭, ೧೨ ನೇ ಕ್ರಾಸ್, ಜೆ.ಪಿ. ನಗರ ೨ನೇ ಹಂತ, ಬೆಂಗಳೂರು

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, 'ರಾಗಿಣಿ', ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್. ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಪುರ.

**ಮುಖ್ಯ ಸಂಯೋಜಕರು :**

**ಪ್ರೊ. ಜಿ.ಎಸ್. ಮುಡಂಬಡಿತ್ತಾಯ,** ಸಂಯೋಜಕರು, ಪಠ್ಯವಸ್ತು ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು-೮೫.

**ಸಲಹೆ ಮತ್ತು ಮಾರ್ಗದರ್ಶನ :**

**ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು-೮೫.

**ಶ್ರೀಮತಿ ಸಿ. ನಾಗಮಣಿ,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು-೮೫.

**ಕಾರ್ಯಕ್ರಮ ಸಂಯೋಜಕರು :**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು-೮೫

# ಮುನ್ನುಡಿ

೨೦೦೫ ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೇ ಸಾಲಿನಿಂದ ಒಂದನೆಯ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೫ ನೆಯ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು ೬ ರಿಂದ ೧೦ ನೆಯ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.

- ಕಲಿಕೆಯನ್ನು ಜೀವನದ ಆವಶ್ಯಕತೆಗಳೊಂದಿಗೆ ಜೋಡಿಸುವುದು.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಆವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.

ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach), ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಆವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲ್ಯಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲ್ಯಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಮದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲ್ಯಗಳ ಸಂವರ್ಧನೆಯೇ ಕಲಿಕೆ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಕೆಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.

**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು-೮೫.

**ನಾಗೇಂದ್ರ ಕುಮಾರ್,**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು-೮೫.

# ಸಮಕ್ಷಮ

ಭಾರತ ಸರ್ಕಾರದ ೨೦೦೫ರ ರಾಷ್ಟ್ರೀಯ ಶಾಲಾ ಪಠ್ಯಕ್ರಮದ ಚೌಕಟ್ಟಿನ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಶಿಕ್ಷಣ ಕ್ಷೇತ್ರದಲ್ಲಿ ತ್ರಿಭಾಷಾ ಸೂತ್ರವನ್ನು ಜಾರಿಗೊಳಿಸಿರುವ ಕಾರಣ ಕನ್ನಡೇತರ ಮಾತೃಭಾಷಿಕರು ಕನ್ನಡವನ್ನು ದ್ವಿತೀಯ ಅಥವಾ ತೃತೀಯ ಭಾಷೆಯನ್ನಾಗಿ ಕಲಿಯಲು ಅವಕಾಶ ಕಲ್ಪಿಸಿದೆ. ಕರ್ನಾಟಕದಲ್ಲಿ ಕನ್ನಡವೇ ರಾಜ್ಯಭಾಷೆ, ಪ್ರಾಂತೀಯ ಭಾಷೆ, ಸಂಪರ್ಕ ಭಾಷೆಯಾಗಿದೆ. 'ಕನ್ನಡ' ಪರಿಸರದಲ್ಲಿ ಜನಸಾಮಾನ್ಯರು ದೈನಂದಿನ ವ್ಯವಹಾರಗಳಲ್ಲಿ ಬಳಸುವ ಭಾಷೆಯಾಗಿದೆ. ಈ ಸಹಜ ಸನ್ನಿವೇಶದಲ್ಲಿ ಕನ್ನಡೇತರರೂ ಬದುಕುತ್ತಿರುವುದರಿಂದ ಅವರ ವ್ಯವಹಾರಕ್ಕೆ ಅನುಕೂಲವಾಗಲೆಂಬ ಉದ್ದೇಶದಿಂದ ಕನ್ನಡವನ್ನು ಕಲಿಯಲು ಅವಕಾಶ ಮಾಡಿಕೊಟ್ಟಿದೆ. ಇಂದು ಕನ್ನಡೇತರರೂ ಕನ್ನಡ ಕಲಿಯುವುದು ಅನಿವಾರ್ಯವಾಗಿದೆ.

ಒಂದನೆಯ ತರಗತಿಯಿಂದ ಕನ್ನಡವನ್ನು ಪ್ರಥಮ ಭಾಷೆಯಾಗಿ ಕಲಿಸುವುದರ ಜೊತೆಗೆ ಐದನೆಯ ತರಗತಿಯಿಂದ ದ್ವಿತೀಯ ಭಾಷೆಯಾಗಿ, ಪ್ರಸ್ತುತ ಆರನೆಯ ತರಗತಿಯಿಂದ ತೃತೀಯ ಭಾಷೆಯಾಗಿ ಕಲಿಸುವ ಯೋಜನೆಯಿಂದ ಈ ಪಠ್ಯಪುಸ್ತಕ ರಚನೆಯಾಗಿದೆ. ಕನ್ನಡ ಭಾಷೆಯ ಬಗ್ಗೆ ಆಸಕ್ತಿ, ಕುತೂಹಲ, ಪ್ರೀತಿ ಉಂಟಾಗುವಂತೆ ಮಕ್ಕಳ ವಯೋಮಟ್ಟ, ಮಾನಸಿಕ ಮಟ್ಟವನ್ನು ಗಮನದಲ್ಲಿರಿಸಿಕೊಂಡು ಶಿಶುಕೇಂದ್ರಿತ ಪಠ್ಯವನ್ನು ಸಿದ್ಧಗೊಳಿಸಲಾಗಿದೆ.

ಭಾಷಾ ಕೌಶಲಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದರ ಹಿನ್ನೆಲೆಯಲ್ಲಿ ಸಾಮರ್ಥ್ಯಾಧಾರಿತ, ಚಟುವಟಿಕೆ ಆಧಾರಿತ ಮತ್ತು ಸಂತಸದಾಯಕ ಸನ್ನಿವೇಶವನ್ನು ಆಧರಿಸಿ ಜನಪ್ರಿಯ ಪ್ರಾಸಗೀತೆ, ಹಾಸ್ಯಗೀತೆ, ಭಾವಗೀತೆ, ಜನಪದಗೀತೆ, ಸಂಭಾಷಣೆ, ಸಾಧಕರ ಸಾಧನೆ, ನಾಡು ನುಡಿ ಪರಿಚಯ, ರೈತನ ದುಡಿಮೆ, ಮೌಲ್ಯಯುತ ಕಥೆ ಹೀಗೆ ಬೇರೆ ಬೇರೆ ಮಾದರಿಯ ಪಾಠಗಳನ್ನು ಅಳವಡಿಸಲಾಗಿದೆ. ಅಂತರ್ಗತ, ರಚನಾತ್ಮಕ ಹಾಗೂ ಸುರುಳಿಯಾಕಾರದ ವಿಧಾನ ಅನುಸರಿಸಿದೆ.

ಮಕ್ಕಳನ್ನು ಕಲಿಕೆಗೆ ಸಿದ್ಧಗೊಳಿಸಲು ಹಾಗೂ ಶಿಕ್ಷಕರ ಬೋಧನೆಗೆ ಅನುಕೂಲವಾಗಲು ಪ್ರವೇಶದ ಜೊತೆಗೆ ಪೂರಕ ಚಟುವಟಿಕೆಯನ್ನು ನೀಡಿದೆ. ಲೇಖಕ-ಲೇಖಕಿಯರನ್ನು ಪರಿಚಯಿಸಿದೆ. ಕ್ಷೇತ್ರ, ಸಾಮರ್ಥ್ಯ ನೀಡಿದೆ. ಓದಿ-ತಿಳಿಯಿರಿ ಭಾಗದಲ್ಲಿ ಪ್ರಾದೇಶಿಕ ಪರ್ಯಾಯರೂಪದ ಶಬ್ದಾರ್ಥವನ್ನು, ಗಮನಿಸಿ-ತಿಳಿಯಿರಿ ಭಾಗದಲ್ಲಿ ವಿವರಣಾತ್ಮಕ ಮಾಹಿತಿಯನ್ನು ಸೇರಿಸಿದೆ. ಅಭ್ಯಾಸದಲ್ಲಿ ಗ್ರಹಿಕೆ, ತಿಳುವಳಿಕೆ, ಅಭಿವ್ಯಕ್ತಿ, ಪ್ರಶಂಸಾ ಪ್ರಶ್ನೆಗಳನ್ನು ಕೊಟ್ಟಿದೆ. ಕ್ರಿಯಾತ್ಮಕ ವ್ಯಾಕರಣವನ್ನು ಭಾಷಾಭ್ಯಾಸದಲ್ಲಿ ಸೂಚನಾರೀತಿಯಲ್ಲಿ ನಿರೂಪಿಸಿ, ಸಂಕ್ಷಿಪ್ತ ಮಾಹಿತಿ ನೀಡಿ, ಪ್ರಾಯೋಗಿಕತೆಗೂ ಅವಕಾಶ ಕಲ್ಪಿಸಿದೆ. ಭಾಷಾ ಚಟುವಟಿಕೆಯಲ್ಲಿ ಭಾಷಾ ಸೃಜನಶೀಲತೆಗೆ ಹಾಗೂ ಶುದ್ಧ ಭಾಷಾ ಬಳಕೆಗೆ ಅವಕಾಶ ಮಾಡಿಕೊಟ್ಟಿದೆ. ಪ್ರತಿ ಪಾಠದ ಕೊನೆಯಲ್ಲಿ ಪಾಠದ ಆಶಯಕ್ಕೆ ತಕ್ಕಂತೆ ಸಂದೇಶವನ್ನು ನೀಡಿದೆ. ಪಠ್ಯದ ಅಭ್ಯಾಸದಲ್ಲಿ ಚಟುವಟಿಕೆ, ಭಾಷಾಭ್ಯಾಸ, ಭಾಷಾ ಚಟುವಟಿಕೆಯ ಮುಖೇನ ಮಕ್ಕಳಲ್ಲಿ ಸೃಜನಶೀಲತೆಯನ್ನು ಬೆಳೆಸುವ ಪ್ರಯತ್ನ ಮಾಡಿದೆ. ಗ್ರಹಿಕೆಗೆ ಅನುಕೂಲವಾಗಲೆಂದು, ಕೆಲವು ಪಾಠಗಳಿಗೆ ಪೂರಕ ಓದು, ವ್ಯಾಕರಣ ಮಾಹಿತಿ ಸೇರಿಸಿದೆ. ಈ ಪುಸ್ತಕದಲ್ಲಿ ಉತ್ತರ ಬರೆಯಲು ಅವಕಾಶ ಮಾಡಿರುವುದರಿಂದ ಇದು ಪಠ್ಯ ಹಾಗೂ ಪ್ರಾಯೋಗಿಕ ಅಭ್ಯಾಸ ಸಹಿತ ಪುಸ್ತಕವಾಗಿದೆ.

ತೃತೀಯ ಭಾಷೆ ಆಯ್ಕೆ ಮಾಡಿಕೊಂಡ ಎಲ್ಲಾ ಮಕ್ಕಳ ಭಾಷಾಜ್ಞಾನ ಒಂದೇ ಮಟ್ಟದಲ್ಲಿ ಇರುವುದಿಲ್ಲ. ಹಾಗಾಗಿ ಮಕ್ಕಳು ತಮ್ಮ ಜ್ಞಾನವನ್ನು ತಾವೇ ಕಟ್ಟಿಕೊಳ್ಳಲು ಅನುಕೂಲ ಮಾಡಿಕೊಡುವ ಚಟುವಟಿಕೆಗಳನ್ನು ನೀಡಲಾಗಿದೆ. ಸೃಜನಶೀಲ ಹಾಗೂ ಕ್ರಿಯಾಶೀಲ ಶಿಕ್ಷಕರು ಮಕ್ಕಳಿಗೆ ಭಾಷೆಯ ಬಗ್ಗೆ ಪ್ರೀತಿಯುಂಟಾಗುವಂತೆ ವಿವಿಧ ನೆಲೆಗಳಿಂದ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸಿ, ರಚನಾವಾದಿ ತತ್ತ್ವದನ್ವಯ ಮಕ್ಕಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿ ಇನ್ನಷ್ಟು ಆಕರ್ಷಕ ರೀತಿಯಲ್ಲಿ ಬೋಧಿಸಬೇಕೆಂಬ ಆಶಯ ನಮ್ಮದು. ಪರಿಣಾಮಕಾರಿ ಕಲಿಸುವಿಕೆಯಲ್ಲಿ, ಕಲಿಕೆ ಯಶಸ್ವಿಯಾಗುವಲ್ಲಿ ತರಗತಿ ಶಿಕ್ಷಕರ ಪಾತ್ರವೇ ಬಹಳ ಮುಖ್ಯವಾದುದು. ಕಲಿಕೆ ಪಠ್ಯಪುಸ್ತಕ, ಶಿಕ್ಷಕರು ಹಾಗೂ ತರಗತಿ ಕೋಣೆಗಳ ಮಿತಿಗಳನ್ನು ಮೀರಿ ಬೆಳೆಯಬೇಕು. ತರಗತಿಗಳಲ್ಲಿ ಕಲಿಯುವುದೇ ಅಂತಿಮ ಎಂಬ ಭಾವನೆ ಹೋಗಿ ತರಗತಿಯ ಕಲಿಕೆ, 'ಕಲಿಕೆಯ ಆರಂಭ' ಎನ್ನುವ ಬದಲಾದ ಪಠ್ಯಪುಸ್ತಕದ ಆಶಯವನ್ನು ಈ ಪುಸ್ತಕದಲ್ಲಿ ಕಾಣಬಹುದಾಗಿದೆ.

ಸೆಮಿಸ್ಟರ್ ಪದ್ಧತಿಗನುಸಾರವಾಗಿ ಕ್ಷೇತ್ರ ಹಾಗೂ ಸಾಮರ್ಥ್ಯಕ್ಕೆ ಹೊಂದಿಕೆಯಾಗುವಂತೆ 'ಹಾಡಿ ನಲಿ, ಓದಿ ನಲಿ, ನೋಡಿ ಬರೆ' ಪ್ರವೇಶದೊಂದಿಗೆ ಹದಿನಲ್ಕು ಪಾಠಗಳನ್ನು ಹಾಗೂ ಹೆಚ್ಚಿನ ಓದು, ಪಾಠಗಳನ್ನು ಅಳವಡಿಸಿದೆ. ನಮ್ಮ ಪಠ್ಯಪುಸ್ತಕ ರಚನಾ ಸಮಿತಿಯವರಿಗೆ ಇಂತಹ ಅವಕಾಶವನ್ನು ಕಲ್ಪಿಸಿದ ಕರ್ನಾಟಕ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರಿಗೆ, ಉಪನಿರ್ದೇಶಕರಿಗೆ, ಅಧಿಕಾರಿವರ್ಗದವರಿಗೆ, ಸೂಕ್ತ ಮಾರ್ಗದರ್ಶನ ನೀಡಿದ ಮುಖ್ಯ ಸಂಯೋಜಕರಿಗೆ ಹಾಗೂ ಹಿರಿಯ ಸಹಾಯಕ ನಿರ್ದೇಶಕರಿಗೆ ತಂಡದ ಕೃತಜ್ಞತೆಗಳು.

ಪಠ್ಯಕ್ಕೆ ಆಯ್ಕೆ ಮಾಡಿಕೊಂಡ ಆಕರ ಸಂಪನ್ಮೂಲ ಭಾಗಗಳನ್ನು ಅಳವಡಿಸಿಕೊಳ್ಳಲು ಅನುಮತಿಸಿದ ಲೇಖಕರಿಗೂ, ಕೃತಿ ಸ್ವಾಮ್ಯ ಹೊಂದಿದವರಿಗೂ, ಪಠಪುಸ್ತಕ ರಚನೆಯಲ್ಲಿ ನನ್ನೊಂದಿಗೆ ಅತ್ಯಂತ ಶ್ರದ್ಧೆ, ಆಸಕ್ತಿ, ಕಾಳಜಿಯಿಂದ ಸಹಕರಿಸಿದ ಸನ್ಮಿತ್ರ ಸದಸ್ಯರೆಲ್ಲರಿಗೂ, ಸೂಕ್ತ ಸಲಹೆ ನೀಡಿ ಪುಸ್ತಕ ಮೌಲಿಕವಾಗುವಂತೆ ಮಾಡಿದ ಪರಿಶೀಲಕರಿಗೂ, ಸಂಪಾದಕ ಮಂಡಳಿ ಸದಸ್ಯರಿಗೆ, ಪಠ್ಯದ ಆಶಯಕ್ಕೆ ತಕ್ಕಂತೆ ಅಂದವಾದ ಚಿತ್ರ ಬರೆದುಕೊಟ್ಟ ಕಲಾವಿದರಿಗೂ ಅನಂತ ಧನ್ಯವಾದಗಳು.

**ಬಿದರಹಳ್ಳಿ ಕೃಷ್ಣಮೂರ್ತಿ**
ಅಧ್ಯಕ್ಷರು
ನುಡಿ ಕನ್ನಡ-೬ ಪಠ್ಯಪುಸ್ತಕ ರಚನಾ ಸಮಿತಿ

## ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳ ವಿವರ

**ಸರ್ವಾಧ್ಯಕ್ಷರು :**

**ಪ್ರೊ. ಬರಗೂರು ರಾಮಚಂದ್ರಪ್ಪ,** ರಾಜ್ಯಪಠ್ಯಪುಸ್ತಕ ಪರಿಷ್ಕರಣ ಸಮಿತಿ, ಕರ್ನಾಟಕ ಪಠ್ಯಪುಸ್ತಕಸಂಘ(ರಿ.) ಬೆಂಗಳೂರು–೮೫

### ಪರಿಷ್ಕರಣ ಸಮಿತಿ

**ಅಧ್ಯಕ್ಷರು :**

**ಪ್ರೊ. ರಹಮತ್ ತರೀಕೆರೆ,** ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ

**ಸದಸ್ಯರು :**

**ಪ್ರೊ. ರುದ್ರಮುನಿ ಹಿರೇಮಠ,** ಸಹಪ್ರಾಧ್ಯಾಪಕರು, ಕೆ.ಎಸ್.ಎಸ್. ಶಿಕ್ಷಣ ಮಹಾವಿದ್ಯಾಲಯ, ಸರಸ್ವತಿ ಬಡಾವಣೆ, ದಾವಣಗೆರೆ.

**ಶ್ರೀ ಮಹದೇವಸ್ವಾಮಿ.ಬಿ.,** ಕನ್ನಡ ಅಧ್ಯಾಪಕರು, ಎ.ಪಿ.ಎಸ್. ಗ್ರಾಮಾಂತರ ಪ್ರೌಢಶಾಲೆ, ಸೋಮನಹಳ್ಳಿ, ಬೆಂಗಳೂರು–೮೨

**ಶ್ರೀಮತಿ ಪದ್ಮ, ಎ,** ಕನ್ನಡ ಅಧ್ಯಾಪಕಿ, ಎಂ.ಎಲ್.ಎ ಪ್ರೌಢಶಾಲೆ, ೧೫ನೇ ಕ್ರಾಸ್, ಮಲ್ಲೇಶ್ವರಂ ಬೆಂಗಳೂರು–೦೩

**ಶ್ರೀ ರಾಜುಶೆಟ್ಟಿ,** ಕನ್ನಡ ಅಧ್ಯಾಪಕರು, ಸರ್ಕಾರಿ ಪ.ಪೂ.ಕಾಲೇಜು, (ಪ್ರೌಢಶಾಲೆ ವಿಭಾಗ)ಹೊಮ್ಮರಹಳ್ಳಿ, ಹೆಚ್.ಡಿ.ಕೋಟೆ, ತಾ,

**ಶ್ರೀ ಜವರೇಗೌಡ,** ಕನ್ನಡ ಅಧ್ಯಾಪಕರು, ಶ್ರೀ ವಿದ್ಯಾಗಣಪತಿ ಪ್ರೌಢಶಾಲೆ, ಬಿದರಕೋಟೆ, ಮದ್ದೂರು ತಾ, ಮಂಡ್ಯ ಜಿಲ್ಲೆ.

**ಕಲಾವಿದರು:**

**ಶ್ರೀ ವೆಂಕಟೇಶ್,** ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಉರಮಾರ ಕೆಸಲಗೆರೆ, ಮಂಡ್ಯ ದಕ್ಷಿಣ ತಾಲ್ಲೂಕು,

### ಉನ್ನತ ಪರಿಶೀಲನ ಸಮಿತಿ

**ಡಾ. ಎಚ್.ಎಸ್. ರಾಘವೇಂದ್ರರಾವ್,** ನಿವೃತ್ತ ಪ್ರಾಧ್ಯಾಪಕರು, ನಂ.೭, ೧೫ನೇ ಕ್ರಾಸ್, ಜೆ.ಪಿ.ನಗರ, ಬೆಂಗಳೂರು–೭೮

**ಡಾ. ಜಿ.ಆರ್.ತಿಪ್ಪೇಸ್ವಾಮಿ,** ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸ ಗಂಗೋತ್ರಿ , ಮೈಸೂರು–೬

**ಡಾ. ಸೈಯದ್ ಜಮೀರ್‌ಉಲ್ಲಾಷರೀಫ್,** ನಿವೃತ್ತ ಪ್ರಾಂಶುಪಾಲರು, ಭಟ್ಕಳ, ಉತ್ತರ ಕನ್ನಡ ಜಿಲ್ಲೆ

**ಡಾ. ಯಲ್ಲಪ್ಪ ಹಿಮ್ಮಡಿ,** ಎಸ್.ಪಿ.ಎಂ. ಕಲಾ ಮತ್ತು ವಾಣಿಜ್ಯ ಕಾಲೇಜು, ರಾಯಬಾಗ, ಬೆಳಗಾವಿ ಜಿಲ್ಲೆ

**ಡಾ. ಕಲಾವತಿ,** ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಳ್ಳಾರಿ

**ಡಾ. ಪ್ರಶಾಂತ್ ನಾಯಕ್,** ಪ್ರಾಧ್ಯಾಪಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ ಶಂಕರಘಟ್ಟ, ಶಿವಮೊಗ್ಗ.

**ಡಾ. ಗೀತಾವಸಂತ,** ಸಹಪ್ರಾಧ್ಯಾಪಕರು, ಕನ್ನಡ ವಿಭಾಗ ತುಮಕೂರು ವಿಶ್ವವಿದ್ಯಾಲಯ ತುಮಕೂರು.

**ಡಾ. ಸತ್ಯನಾರಾಯಣ,** ಎಚ್.ಎಸ್. ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವಕಾಲೇಜು, ಬಸವನಗುಡಿ, ಬೆಂಗಳೂರು.

**ಸಲಹೆ ಮತ್ತು ಮಾರ್ಗದರ್ಶನ :**

**ಶ್ರೀ ಎಂ.ಪಿ. ಮಾದೇಗೌಡ,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ.) ಬೆಂಗಳೂರು–೮೫

**ಶ್ರೀ ಕೆ.ಜಿ.ರಂಗಯ್ಯ,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ.) ಬೆಂಗಳೂರು–೮೫

**ಕಾರ್ಯಕ್ರಮ ಸಂಯೋಜಕರು :**

**ಶ್ರೀಮತಿ ಎಂ.ಡಿ. ಉಷಾ,** ಹಿರಿಯ ಸಹಾಯಕ ನಿರ್ದೇಶಕರು ಕರ್ನಾಟಕ ಪಠ್ಯಪುಸ್ತಕ ಸಂಘ(ರಿ.) ಬೆಂಗಳೂರು–೮೫

## ಪರಿಷ್ಕರಣೆ ಕುರಿತು

ಒಂದರಿಂದ ಹತ್ತನೇ ತರಗತಿಯ ಪಠ್ಯಪುಸ್ತಕಗಳ ಬಗ್ಗೆ ಪ್ರಕಟಗೊಂಡ ಸಾರ್ವಜನಿಕ ಅಭಿಪ್ರಾಯಗಳನ್ನು ಗಮನಿಸಿ ಮಾನ್ಯ ಮುಖ್ಯಮಂತ್ರಿಯವರೂ ಅರ್ಥಸಚಿವರೂ ಆಗಿರುವ ಶ್ರೀ ಸಿದ್ದರಾಮಯ್ಯನವರು ತಮ್ಮ ೨೦೧೪–೧೫ ರ ಬಜೆಟ್‌ನಲ್ಲಿ ತಜ್ಞರ ಸಮಿತಿಯನ್ನು ರಚಿಸುವ ಘೋಷಣೆ ಮಾಡಿದರು. ತಜ್ಞರು ಅನುಸರಿಸಬೇಕಾದ ಮೂಲ ಆಶಯವನ್ನು ಹೀಗೆ ಹೇಳಿದರು: "ಪಠ್ಯಪುಸ್ತಕಗಳನ್ನು ಸಾಮಾಜಿಕ ಸಾಮರಸ್ಯ, ನೈತಿಕಮೌಲ್ಯಗಳು, ವ್ಯಕ್ತಿತ್ವವಿಕಸನ, ವೈಜ್ಞಾನಿಕ ಮತ್ತು ವೈಚಾರಿಕ ಮನೋಭಾವ, ಜಾತ್ಯತೀತತೆ ಮತ್ತು ರಾಷ್ಟ್ರೀಯ ಬದ್ಧತೆಗಳಿಗೆ ಅನುವಾಗುವಂತೆ ತಜ್ಞರ ಸಮಿತಿಯನ್ನು ಪುನರ್ ರಚಿಸಲಾಗುವುದು" ಇದು ಬಜೆಟ್ ಭಾಷಣದಲ್ಲಿ ಸಾದರಪಡಿಸಿದ ಆಶಯ.

ಆನಂತರ ಶಿಕ್ಷಣ ಇಲಾಖೆಯು ಒಂದರಿಂದ ಹತ್ತನೇ ತರಗತಿಯವರೆಗಿನ ಪಠ್ಯಪುಸ್ತಕಗಳ ಪರಿಷ್ಕರಣೆಗಾಗಿ ೨೭ ಸಮಿತಿಗಳನ್ನು ರಚಿಸಿ ದಿನಾಂಕ: ೨೪.೧೧.೨೦೧೪ ರಂದು ಆದೇಶಹೊರಡಿಸಿತು. ಈ ಸಮಿತಿಗಳು ವಿಷಯವಾರು ಮತ್ತು ತರಗತಿವಾರು ಮಾನದಂಡಕ್ಕನುಗುಣವಾಗಿ ರಚಿತವಾದವು. ವಿವಿಧ ಪಠ್ಯವಿಷಯಗಳಿಗೆ ಸಂಬಂಧಿಸಿದ ತಜ್ಞರು, ಅಧ್ಯಾಪಕರು ಈ ಸಮಿತಿಗಳಲ್ಲಿದ್ದಾರೆ. ಈಗಾಗಲೇ ಲಿಖಿತವಾಗಿ ಬಂದಿರುವ ಅನೇಕ ಆಕ್ಷೇಪಗಳು ಮತ್ತು ವಿಶ್ಲೇಷಣೆಗಳನ್ನು ಪರಿಶೀಲಿಸಿ, ತಪ್ಪು ಒಪ್ಪುಗಳ ಬಗ್ಗೆ ನಿರ್ಣಯಿಸಿ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ ಹೊಣೆಹೊತ್ತ ಈ ಸಮಿತಿಗಳಿಗೆ 'ಅಗತ್ಯವಿದ್ದಲ್ಲಿ ಪಠ್ಯವಸ್ತುವನ್ನು ಪರಿಷ್ಕರಿಸಿ ನಂತರ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ' ಸ್ವಾತಂತ್ರ್ಯವನ್ನು ೨೪.೧೧.೨೦೧೪ರ ಆದೇಶದಲ್ಲೇ ನೀಡಲಾಗಿತ್ತು. ಆನಂತರ ೧೯.೦೯.೨೦೧೫ ರಂದು ಹೊಸ ಆದೇಶ ಹೊರಡಿಸಿ 'ಅಗತ್ಯವಿದ್ದಲ್ಲಿ ಪುನರ್ ರಚಿಸುವ' ಸ್ವಾತಂತ್ರ್ಯವನ್ನು ನೀಡಲಾಯಿತು. ಹೀಗೆ ಸಮಗ್ರ ಪರಿಷ್ಕರಣೆಗೊಂಡ ಪಠ್ಯಪುಸ್ತಕಗಳನ್ನು ೨೦೧೬–೧೭ ರ ಬದಲು ೨೦೧೭–೧೮ನೇ ಶೈಕ್ಷಣಿಕ ವರ್ಷದಲ್ಲಿ ಜಾರಿಗೊಳಿಸಲಾಗುವುದೆಂದು ಇದೇ ಆದೇಶದಲ್ಲಿ ತಿಳಿಸಲಾಯಿತು.

ಅನೇಕ ವ್ಯಕ್ತಿಗಳೂ ಸಂಘಟನೆಗಳೂ ಸ್ವಯಂಪ್ರೇರಿತರಾಗಿ ಪಠ್ಯಪುಸ್ತಕಗಳ ಮಾಹಿತಿದೋಷ, ಆಶಯದೋಷಗಳನ್ನು ಪಟ್ಟಿಮಾಡಿ ಶಿಕ್ಷಣ ಸಚಿವರಿಗೆ, ಪಠ್ಯಪುಸ್ತಕ ಸಂಘಕ್ಕೆ ಕಳುಹಿಸಿದ್ದರು. ಅವುಗಳ ಪರಿಶೀಲನೆಮಾಡಿದ್ದಲ್ಲದೆ, ಸಮಿತಿಗಳಾಚೆಗೆ ಅನೇಕ ಸಂವಾದಗಳನ್ನು ಏರ್ಪಡಿಸಿ ವಿಚಾರ ವಿನಿಮಯ ಮಾಡಿಕೊಂಡಿದ್ದೇವೆ. ಪ್ರಾಥಮಿಕ ಮತ್ತು ಪ್ರೌಢಶಾಲಾ ಅಧ್ಯಾಪಕರ ಸಂಘಗಳ ಜೊತೆ ಚರ್ಚಿಸಿದ್ದಲ್ಲದೆ ಪ್ರಶ್ನಾವಳಿ ಸಿದ್ಧಪಡಿಸಿ ಅಧ್ಯಾಪಕರಿಗೆ ಕಳಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಅಧ್ಯಾಪಕರು, ವಿಷಯಪರಿವೀಕ್ಷಕರು ಮತ್ತು ಡಯಟ್ ಪ್ರಾಂಶುಪಾಲರ ಪ್ರತ್ಯೇಕ ಸಭೆಗಳನ್ನು ನಡೆಸಿ ವಿಶ್ಲೇಷಣಾತ್ಮಕ ಅಭಿಮತಗಳನ್ನು ಪಡೆಯಲಾಗಿದೆ. ವಿಜ್ಞಾನ, ಸಮಾಜವಿಜ್ಞಾನ, ಗಣಿತ, ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದ ತಜ್ಞರಿಗೆ ಮೊದಲೇ ಪಠ್ಯಪುಸ್ತಕಗಳನ್ನು ಕಳುಹಿಸಿ ಆನಂತರ ಸಭೆ ನಡೆಸಿ ಚರ್ಚಿಸಲಾಗಿದೆ. ಮಹಿಳಾ ಸಂಘಟನೆ ಹಾಗೂ ವಿಜ್ಞಾನ ಸಂಬಂಧಿ ಸಂಸ್ಥೆಗಳನ್ನು ಆಹ್ವಾನಿಸಿ ಚಿಂತನೆ ನಡೆಸಲಾಗಿದೆ. ಹೀಗೆ ಎಲ್ಲಾ ಮೂಲಗಳಿಂದ ಪಡೆದ ಅರಿವಿನ ಆಧಾರದ ಮೇಲೆ ಪಠ್ಯಪುಸ್ತಕಗಳನ್ನು ಅಗತ್ಯವಿದ್ದಕಡೆ ಪರಿಷ್ಕರಿಸಲಾಗಿದೆ.

ಬಹುಮುಖ್ಯವಾದ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬೇಕು. ಕೇಂದ್ರೀಯ ಶಾಲಾ (ಎನ್.ಸಿ.ಇ.ಆರ್.ಟಿ) ಪಠ್ಯಪುಸ್ತಕಗಳ ಜೊತೆ ರಾಜ್ಯದ ಪಠ್ಯಪುಸ್ತಕಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ

ಸಲಹೆಗಳನ್ನು ನೀಡಲು ವಿಜ್ಞಾನ, ಗಣಿತ ಮತ್ತು ಸಮಾಜವಿಜ್ಞಾನಕ್ಕೆ ಸಂಬಂಧಿಸಿದಂತೆ ತಜ್ಞರ ಮೂರು ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಗಳು ನೀಡಿದ ತೌಲನಿಕ ವಿಶ್ಲೇಷಣೆ ಮತ್ತು ಸಲಹೆಗಳನ್ನು ಆಧರಿಸಿ ರಾಜ್ಯ ಪಠ್ಯಪುಸ್ತಕಗಳ ಗುಣಮಟ್ಟವನ್ನು ಹೆಚ್ಚಿಸಲಾಗಿದೆ. ಕೇಂದ್ರೀಯ ಶಾಲಾ ಪಠ್ಯಪುಸ್ತಕಗಳಿಗಿಂತ ನಮ್ಮ ರಾಜ್ಯದ ಪಠ್ಯಪುಸ್ತಕಗಳ ಗುಣಮಟ್ಟ ಕಡಿಮೆಯಾಗದಂತೆ ಕಾಯ್ದುಕೊಳ್ಳಲಾಗಿದೆ. ಜೊತೆಗೆ ಆಂಧ್ರ, ತಮಿಳುನಾಡು, ಮಹಾರಾಷ್ಟ್ರಗಳ ಪಠ್ಯಪುಸ್ತಕಗಳ ಜೊತೆ ನಮ್ಮ ಪಠ್ಯಪುಸ್ತಕಗಳನ್ನು ಪರಿಶೀಲಿಸಲಾಗಿದೆ.

ಇನ್ನೊಂದು ಸ್ಪಷ್ಟನೆಯನ್ನು ನೀಡಲು ಬಯಸುತ್ತೇನೆ. ನಮ್ಮ ಸಮಿತಿಗಳು ಮಾಡಿರುವುದು ಪರಿಷ್ಕರಣೆಯೇ ಹೊರತು ಪಠ್ಯಪುಸ್ತಕಗಳ ಸಮಗ್ರ ರಚನೆಯಲ್ಲ. ಆದ್ದರಿಂದ ಈಗಾಗಲೇ ರಚಿತವಾಗಿರುವ ಪಠ್ಯಪುಸ್ತಕಗಳ ಸ್ವರೂಪಕ್ಕೆ ಎಲ್ಲಿಯೂ ಧಕ್ಕೆಯುಂಟುಮಾಡಿಲ್ಲ. ಲಿಂಗತ್ವ ಸಮಾನತೆ, ಪ್ರಾದೇಶಿಕ ಪ್ರಾತಿನಿಧ್ಯ, ರಾಷ್ಟ್ರೀಯ ಸಮಗ್ರತೆ, ಸಮಾನತೆ, ಸಾಮಾಜಿಕ ಸಾಮರಸ್ಯಗಳ ಹಿನ್ನೆಲೆಯಲ್ಲಿ ಕೆಲವು ಪರಿಷ್ಕರಣೆಗಳು ನಡೆದಿವೆ. ಹೀಗೆ ಪರಿಷ್ಕರಿಸುವಾಗ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ರಾಜ್ಯ ಪಠ್ಯಕ್ರಮ ಚೌಕಟ್ಟುಗಳನ್ನು ಮೀರಿಲ್ಲವೆಂದು ತಿಳಿಸಬಯಸುತ್ತೇವೆ: ಜೊತೆಗೆ ನಮ್ಮ ಸಂವಿಧಾನದ ಆಶಯಗಳನ್ನು ಅನುಸರಿಸಲಾಗಿದೆ. ಸಮಿತಿಗಳು ಮಾಡಿದ ಪರಿಷ್ಕರಣೆಯನ್ನು ಮತ್ತೊಮ್ಮೆ ಪರಿಶೀಲಿಸಲು ವಿಷಯವಾರು ಉನ್ನತ ಪರಿಶೀಲನ ಸಮಿತಿಗಳನ್ನು ರಚಿಸಿ ಅಭಿಪ್ರಾಯಪಡೆದು ಅಳವಡಿಸಲಾಗಿದೆ.

ಹೀಗೆ ಕ್ರಮಬದ್ಧವಾಗಿ ನಡೆದ ಕೆಲಸಕ್ಕೆ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಂಡ ೨೭ ಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರನ್ನು ಹಾಗೂ ಉನ್ನತ ಪರಿಶೀಲನಾ ಸಮಿತಿಯ ಸಮಸ್ತರನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅಂತೆಯೇ ಸಮಿತಿಗಳ ಕೆಲಸ ಸುಗಮವಾಗಿ ನಡೆಯುವಂತೆ ವ್ಯವಸ್ಥೆಮಾಡಲು ಕಾರ್ಯಕ್ರಮ ಅಧಿಕಾರಿಗಳಾಗಿ ನಿಷ್ಠೆಯಿಂದ ದುಡಿದ ಪಠ್ಯಪುಸ್ತಕ ಸಂಘದ ಎಲ್ಲಾ ಅಧಿಕಾರಿಗಳನ್ನೂ ನೆನೆಯುತ್ತೇವೆ. ಸಹಕರಿಸಿದ ಸಿಬ್ಬಂದಿಗೂ ನಮ್ಮ ವಂದನೆಗಳು. ಅಭಿಪ್ರಾಯ ನೀಡಿ ಸಹಕರಿಸಿದ ಸರ್ವ ಸಂಘಟನೆಗಳು ಮತ್ತು ತಜ್ಞರಿಗೆ ಧನ್ಯವಾದಗಳು.

(ಎಂ.ಪಿ. ಮಾದೇಗೌಡ)
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)
ಬೆಂಗಳೂರು–೮೫

(ಪ್ರೊ. ಬರಗೂರು ರಾಮಚಂದ್ರಪ್ಪ)
ಸರ್ವಾಧ್ಯಕ್ಷರು
ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)
ಬೆಂಗಳೂರು–೮೫




# ಪರಿವಿಡಿ

ಭಾಗ – ೧

# ಅ. ಹಾಡಿ ನಲಿ

## ತಾಯಿ ತಂದೆ

– ರಾ. ಮೊ. ವಿಶ್ವಾಮಿತ್ರ





ಮುದ್ದು ಕಂದ ಬಾರೊ ಎಂದು
ತಾಯಿ ನನ್ನ ಕರೆವಳು
ಉಣಲು ತಿನಲು ಕೊಟ್ಟು ನನ್ನ
ಮುದ್ದುಗೈಯುತಿರುವಳು ॥ ೧ ॥

ಏನು ಬೇಕೋ ಅದನು ಕೊಟ್ಟು
ಅಪ್ಪ ಬುದ್ಧಿ ಹೇಳ್ವರು
ಓದು ಕಂದ ಜಾಣನಾಗು
ಗುಣವ ಗಳಿಸು ಎನುವರು ॥ ೨ ॥

ಸುಳ್ಳು ಗಿಳ್ಳು ಹೇಳಬೇಡ
ಜಾಣ ನೀನು ಎಂಬರು
ಕಷ್ಟಪಟ್ಟು ಕೆಲಸ ಮಾಡು
ಇಷ್ಟ ಸಿದ್ಧಿ ಎಂಬರು ॥ ೩ ॥

ತಾಯಿ ತಂದೆ ನಿತ್ಯ ನಿನ್ನ
ಹಿತದ ಚಿಂತೆಗೈವರು
ನಾಡ ಹಿತಕೆ ದುಡಿಯೊ ಕಂದ
ಸುಖದಿ ಬಾಳು ಎಂಬರು ॥ ೪ ॥

ಅವರ ಮಾತ ಮರೆಯಲಾರೆ
ಅದುವೆ ದಾರಿ ದೀಪವು
ತಾಯಿ ತಂದೆ ದೇವರೆನಗೆ
ಅವರೆ ನನ್ನ ಜೀವವು ॥ ೫ ॥

# ಹಾರಯಿಕೆ

– ವಸಂತ ಕುಷ್ಟಗಿ

ಎದೆಯ ಬಾಂದಳದಲ್ಲಿ ಬಿದಿಗೆ ಚಂದ್ರಮ ಮೂಡಿ
ಸೊಗದಸೊದೆ ಎಲ್ಲೆಡೆಯು ಚೆಲ್ಲುತಿರಲಿ
ಭಾರತಾಂಬೆಯ ಕರುಳ ಕುಡಿಕುಡಿಗಳೆಲ್ಲರಲಿ
ಕಾರುಣ್ಯದಾ ಬೆಳಕು ಚಿಮ್ಮಿಬರಲಿ ॥ ೧ ॥



ಬರಿದು ಬರಿದಾಗಿರುವ ಮನದ ಮರುಭೂಮಿಯಲಿ
ಪ್ರೀತಿ ಓಯಾಸಿಸ್ಸು ತಾ ಪುಟಿಯಲಿ
ಆ ನೀರನೆಲೆಯಿಂದ ಬರಡು ನೆಲದೊಳಗೆಲ್ಲ
ಅಚ್ಚ ಹಸುರಿನ ಪಚ್ಚೆಮೊಳೆದೋರಲಿ ॥ ೨ ॥

ಮಣ್ಣ ಕಣಕಣದಲ್ಲೂ ತಂಪು ತಣಿವುಗಳಿರಲಿ
ಒಲವಿನೊರತೆಯು ಎಂದೂ ಬತ್ತದಿರಲಿ
ಕಸವು ರಸವಾಗಿ ಬಾಳು ನಂದನವಾಗಿ
ಸೋದರತೆ ಹೊಳೆಯಾಗಿ ಹರಿದುಬರಲಿ ॥ ೩ ॥



**ಕೃತಿಕಾರರ ಪರಿಚಯ:**



ಕೊಪ್ಪಳ ಜಿಲ್ಲೆಯ ಕುಷ್ಟಗಿಯವರಾದ ವಸಂತ ಕುಷ್ಟಗಿಯವರು ೧೯೩೬ರಲ್ಲಿ ಜನಿಸಿದರು. 'ಹೊಸ ಹೆಜ್ಜೆ', 'ಗಾಂಧಾರಿಯ ಕರುಣೆ', 'ಭಾವದೀಪ್ತಿ', 'ಬೆತ್ತಲೆಯ ಭಾನು', 'ದಿಬ್ಬಣದ ಹಾಡು' ಮುಂತಾದವು ಇವರ ಕವನಸಂಗ್ರಹಗಳು.

ಪ್ರಸ್ತುತ ಪದ್ಯ ಭಾಗವನ್ನು 'ಭಾವ ದೀಪ್ತಿ' ಕವನ ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ. ಕುಷ್ಟಗಿಯವರಿಗೆ ಕರ್ನಾಟಕ ಸರ್ಕಾರವು ೨೦೦೬ ರಲ್ಲಿ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

ಆ. ಓದಿ – ನಲಿ

# ಒಗ್ಗಟ್ಟಿನಲ್ಲಿ ಬಲ

## ಚಿತ್ರ ಸಹಿತ ಕಥೆ ಓದು

ಒಬ್ಬ ಹಕ್ಕಿಗಳಿಗಾಗಿ ಬೀಸಿದನು. ಬಲೆಯಲ್ಲಿ ಗಳನ್ನು ಹಾಕಿದನು. ಹಕ್ಕಿಗಳ ಗುಂಪು ಗಳನ್ನು ನೋಡಿದವು. ಕೆಲವು ಮರಿಹಕ್ಕಿಗಳು ಯನ್ನು ಗಮನಿಸಲಿಲ್ಲ. ತಿನ್ನಲು ಹೋಗಿ ಸಿಕ್ಕಿ ಕೊಂಡವು. "ಚೀಂವ್ ಚೀಂವ್" ಎಂದು ಕೂಗಿಕೊಂಡವು. ನು ದೂರದಲ್ಲಿ ಬರುತ್ತಿರುವುದನ್ನು ಕಂಡವು. ಕೂಡಲೇ ದೊಡ್ಡ ಹಕ್ಕಿಗಳು ಒಂದು ಉಪಾಯ ಹೂಡಿದವು. ಎಲ್ಲಾ ಸೇರಿ ಯನ್ನು ಹಿಡಿದು ಮೇಲೆ ಹಾರಿದವು. ಬೇರೆಡೆಗೆ ಹಾರಿ ಹೋಗಿ ಮರಿಹಕ್ಕಿಗಳನ್ನು ಬಿಡಿಸಿದವು.

## ಇ. ನೋಡಿ – ಬರೆ

೧. ಕೊಟ್ಟಿರುವ ಚಿತ್ರವನ್ನು ಗಮನಿಸಿ ನೀವೂ ಬರೆಯಿರಿ; ಚಿತ್ರದಲ್ಲಿರುವ ಪ್ರಾಣಿಯ ಹೆಸರನ್ನು ಕೊಟ್ಟಿರುವ ಜಾಗದಲ್ಲಿ ಬರೆಯಿರಿ :





ಮೇಲಿನ ಮಾದರಿಯಂತೆ ಚಿತ್ರ ರಚಿಸಿ

೨. ಗೆರೆಗಳನ್ನು ಕೂಡಿಸಿ ಚಿತ್ರ ರಚನೆ ಮಾಡಿ, ಬಣ್ಣ ಹಚ್ಚಿರಿ. ಪ್ರಾಣಿಯ ಹೆಸರನ್ನು ಕೊಟ್ಟಿರುವ ಜಾಗದಲ್ಲಿ ಬರೆಯಿರಿ :







ಭಾಗ – ೨

# ೧. ದುಡಿಮೆ




– ಚೆನ್ನವೀರ ಕಣವಿ

**ಪ್ರವೇಶ :**

'ಕೈಕೆಸರಾದರೆ ಬಾಯಿಮೊಸರು' 'ಕಾಯಕವೇ ಕೈಲಾಸ' ಎಂಬ ಅನುಭವದ ನುಡಿಗಳಿವೆ. ಇವು ಮಾನವ ಜೀವನದಲ್ಲಿ ದುಡಿಮೆಯ ಮಹತ್ವವನ್ನು ಹೇಳುತ್ತವೆ. ಕಷ್ಟಪಟ್ಟು ಕೆಲಸ ಮಾಡುವುದರಿಂದ ಅನುಭವವನ್ನು ಪಡೆದು ಒಳ್ಳೆಯ ಫಲದೊಂದಿಗೆ ಗುರಿಯನ್ನು ಮುಟ್ಟಬಹುದು. ನಿರಂತರ ದುಡಿಮೆಯಿಂದ ಸ್ವಾವಲಂಬನೆಯನ್ನು ಪಡೆಯುವುದರೊಂದಿಗೆ ಸ್ವಾತಂತ್ರ್ಯದ ಸವಿಯನ್ನು ಸವಿಯಬಹುದು. ಕಣವಿಯವರ ಈ ಕವಿತೆಯು ದುಡಿಮೆಯ ಪ್ರಯೋಜನಗಳನ್ನು ಸುಂದರವಾದ ನಿದರ್ಶನಗಳ ಮೂಲಕ ಹೇಳುತ್ತಿದೆ. ದೇಶವನ್ನು ಕಟ್ಟುವುದಕ್ಕೆ ಸಹ ಜನರ ದುಡಿಮೆಯೇ ಕಾರಣವಾಗುವುದು ಎಂದು ಸೂಚಿಸುತ್ತಿದೆ.



ಸಿಪ್ಪೆಯ ಸುಲಿದು ತೆಗೆದರೆ ಮಾತ್ರ
ಹಣ್ಣಿನ ತಿರುಳನು ಮೆಲಬಹುದು;
ತೆಂಗಿನಕಾಯಿಯ ಚಿಪ್ಪನು ಒಡೆದರೆ
ಕೊಬ್ಬರಿ ತಿಳಲನು ತಿನಬಹುದು. ॥೧॥

ಅಕ್ಕಿಯ ಸುಡುಸುಡು ನೀರೊಳು ಕುದಿಸಲು
ಗಮಗಮ ಅನ್ನವನುಣಬಹುದು;
ಅರಿವೆಯ ತಂದು ದಾಟೆಗೆ ಹೊಲಿದರೆ
ಚಂದದ ಅಂಗಿಯ ತೊಡಬಹುದು. ॥೨॥

ಅಕ್ಷರ ಓದಲು ಬರೆಯಲು ಕಲಿತರೆ
ಕವಿತಾ ಕಥೆಗಳು ತಿಳಿಯುವವು;
ದಿನವೂ ತಪ್ಪದೆ ಶಾಲೆಗೆ ಹೋದರೆ
ಪ್ರಶ್ನೆಗೆ ಉತ್ತರ ಹೊಳೆಯುವವು. ॥೩॥

ದಿನ ದಿನ ಹೂವಿನ ಬಂಡನು ಹೀರಲು
ಜೇನುತುಪ್ಪ ಕೊಡ ತುಂಬುವದು;
ಹನಿಹನಿ ಸೆಳಕಿನ ಮಳೆ ಸುರಿದಾಗಲೆ
ಹಳ್ಳ ಬಾವಿ ಕೆರೆ ತುಳುಕುವವು. ॥೪॥



ಎಲ್ಲರು ತಮ್ಮಯ ಕೆಲಸವ ತಾವೇ
ಮಾಡಲು ದೇಶವು ಬೆಳೆಯುವದು;
ದುಡಿದರೆ ಮಾತ್ರವೆ ದೊಡ್ಡವನಾಗುವೆ
ಸ್ವಾತಂತ್ರ್ಯದ ಸವಿ ತಿಳಿಯುವದು. ॥೫॥

**ಕ್ಷೇತ್ರ :–** ಆಲಿಸುವುದು.

**ಸಾಮರ್ಥ್ಯ :–** ಸರಳ ಹಾಗು ಬಳಕೆಯಲ್ಲಿರುವ ಜನಪ್ರಿಯ ಪ್ರಾಸಗೀತೆಗಳನ್ನು ಆಲಿಸುವುದು ಮತ್ತು ಅರ್ಥಮಾಡಿಕೊಳ್ಳುವುದು.

### ಕೃತಿಕಾರರ ಪರಿಚಯ:



ಚೆನ್ನವೀರ ಕಣವಿಯವರು ೨೮-೦೬-೧೯೨೮ರಲ್ಲಿ ಈಗಿನ ಗದಗ ಜಿಲ್ಲೆಯ ಹೊಂಬಳದಲ್ಲಿ ಜನಿಸಿದರು. ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟಣ ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರು 'ಕಾವ್ಯಾಕ್ಷಿ', 'ಭಾವಜೀವಿ', 'ಆಕಾಶಬುಟ್ಟಿ', 'ದೀಪಧಾರಿ', 'ನೆಲಮುಗಿಲು', 'ಚಿರಂತನ ದಾಹ', 'ಮಣ್ಣಿನ ಮೆರವಣಿಗೆ' ಮೊದಲಾದ ಕವನ ಸಂಕಲನಗಳನ್ನು ರಚಿಸಿದ್ದಾರೆ.

'ಹಕ್ಕಿಪುಚ್ಚ' ಇವರ ಶಿಶುಕಾವ್ಯ ಸಂಕಲನ. 'ಸಾಹಿತ್ಯಚಿಂತನ', 'ಕಾವ್ಯಾನುಸಂಧಾನ' ಇವರ ವಿಮರ್ಶಾ ಕೃತಿ. ೧೯೯೬ರಲ್ಲಿ ಹಾಸನದಲ್ಲಿ ನಡೆದ 65ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರ 'ಜೀವಧ್ವನಿ' ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸಂದಿದೆ. ಇವರು ಪಂಪ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ.

ಪ್ರಸ್ತುತ 'ದುಡಿಮೆ' ಕವನವನ್ನು 'ಕಣವಿ ಸಮಗ್ರಕಾವ್ಯ' ಕೃತಿಯಿಂದ ಆಯ್ದುಕೊಳ್ಳಲಾಗಿದೆ.

### ಪದಗಳ ಅರ್ಥ :

ಅರಿವೆ – ಬಟ್ಟೆ
ಚಿಪ್ಪು – ತೆಂಗಿನ ಕರಟ
ತಿಳಲು – ತಿರುಳು
ತಿರುಳು – ಸತ್ವ, ಸಾರ
ತುಳುಕು – ತುಂಬಿಚೆಲ್ಲು, ಹೊರಚೆಲ್ಲು
ಬಂಡು – ಮಕರಂದ
ಮೆಲು – ತಿನ್ನು
ರಾಟೆ – ನೂಲುವ ಸಾಧನ
ಸೆಳಕು – ಒಂದು ಬಾರಿ ಬಂದು ನಿಲ್ಲುವ ಮಳೆಯ ಅವಧಿ.

## ಅಭ್ಯಾಸ

### ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಹಣ್ಣಿನ ತಿರುಳನ್ನು ಸವಿಯಲು ಯಾವಾಗ ಸಾಧ್ಯವಾಗುತ್ತದೆ ಎಂದು ಕವಿ ಕಣವಿಯವರು ಹೇಳಿದ್ದಾರೆ?

______________________________

೨. 'ದುಡಿಮೆ' ಪದ್ಯದಲ್ಲಿ ಹೇಳಿರುವಂತೆ ಕೊಬ್ಬರಿಯನ್ನು ನಾವು ಯಾವಾಗ ತಿನ್ನಬಹುದು?

______________________________

೩. 'ದುಡಿಮೆ' ಕವನದಲ್ಲಿ ಹೇಳಿರುವಂತೆ ಓದಲು ಬರೆಯಲು ಕಲಿಯುವುದರಿಂದಾಗುವ ಪ್ರಯೋಜನವೇನು?

______________________________

೪. ಜೇನಿನ ಕೊಡ ಯಾವಾಗ ತುಂಬುವುದೆಂದು ಚೆನ್ನವೀರ ಕಣವಿಯವರು ಹೇಳಿದ್ದಾರೆ?

______________________________

೫. ಪ್ರಶ್ನೆಗೆ ಉತ್ತರ ಯಾವಾಗ ಹೊಳೆಯುವುದೆಂದು 'ದುಡಿಮೆ' ಪದ್ಯದಲ್ಲಿ ಹೇಳಿದೆ?

______________________________

೬. 'ದುಡಿಮೆ' ಕವನದಲ್ಲಿ ತಿಳಿಸಿರುವಂತೆ ಹಳ್ಳ ಬಾವಿ ಕೆರೆಗಳು ತುಳುಕುವುದು ಯಾವಾಗ?

______________________________

೭. ಸ್ವಾತಂತ್ರ್ಯದ ಸವಿ ಯಾವಾಗ ತಿಳಿಯುವುದೆಂದು ಕವಿ ಕಣವಿಯವರು ಹೇಳಿದ್ದಾರೆ?

______________________________

### ಆ) ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. 'ದುಡಿಮೆ' ಕವನದಲ್ಲಿ ಹೇಳಿರುವಂತೆ ಅನ್ನವನ್ನುಣ್ಣಲು, ಅಂದದ ಅಂಗಿಯನ್ನು ತೊಡಲು ಏನು ಮಾಡಬೇಕು?

______________________________

______________________________

______________________________

೨. ಹಳ್ಳ, ಬಾವಿ, ಕೆರೆ, ಜೇನುತುಪ್ಪದ ಕೊಡ ಯಾವಾಗ ತುಂಬುವವೆಂದು ಚೆನ್ನವೀರ ಕಣವಿಯವರು ಹೇಳಿದ್ದಾರೆ?

______________________________________________

______________________________________________

______________________________________________

೩. ದುಡಿಮೆ ಇಲ್ಲದೆ ಬಾಳಿಲ್ಲ, ದೇಶದ ಪ್ರಗತಿಗೆ ದುಡಿಮೆಯೇ ಮೂಲ ಎಂಬ ಭಾವನೆ 'ದುಡಿಮೆ' ಪದ್ಯದಲ್ಲಿ ಹೇಗೆ ವ್ಯಕ್ತವಾಗಿದೆ?

______________________________________________

______________________________________________

______________________________________________



೪. ಸತತ ಪ್ರಯತ್ನದಿಂದ ಉತ್ತಮವಾದುದನ್ನು ಪಡೆಯಬಹುದು ಎನ್ನುವುದಕ್ಕೆ ಕಣವಿಯವರು ನೀಡಿರುವ ನಿದರ್ಶನಗಳಾವುವು?

______________________________________________

______________________________________________

______________________________________________

**ಇ) ಪ್ರತಿ ಪ್ರಶ್ನೆಗೂ ಆವರಣದಲ್ಲಿ ನಾಲ್ಕು ಆಯ್ಕೆಗಳನ್ನು ಕೊಡಲಾಗಿದೆ. ಸರಿಹೊಂದುವ ಉತ್ತರವನ್ನು ಆರಿಸಿ ಬರೆಯಿರಿ.**

೧. ಅಕ್ಕಿಯನ್ನು ಸುಡುಸುಡು ನೀರಿನಲ್ಲಿ ಏನು ಮಾಡಿದಾಗ ಊಟ ಮಾಡಲು ಘಮಘಮ ಅನ್ನವು ದೊರೆಯುತ್ತದೆ?

ಉತ್ತರ ______________________

(ಕುದಿಸಿದಾಗ, ಆರಿಸಿದಾಗ, ನೆನೆಸಿದಾಗ, ಸುರಿದಾಗ)

೨. ಹಳ್ಳ, ಬಾವಿ, ಕೆರೆಗಳು ತುಂಬಿ ತುಳುಕಲು ಹನಿಹನಿ ಸೆಳಕಿನ ಯಾವುದು ಸುರಿಯಬೇಕು?

ಉತ್ತರ ______________________

(ಹಿಮ, ಹಾಲು, ಜೇನು, ಮಳೆ)

೩. ಕವಿತೆ, ಕಥೆಗಳನ್ನು ತಿಳಿಯಲು ಏನನ್ನು ಕಲಿಯಬೇಕು?

ಉತ್ತರ ______________________

(ಓದು-ಬರಹ, ಆಟ-ಓಟ, ಹಾಡು-ಹಸೆ, ನಾಟಕ-ನೃತ್ಯ)

೪. ಸ್ವಾತಂತ್ರ್ಯದ ಸವಿಯನ್ನು ತಿಳಿಯಲು ಏನನ್ನು ಮಾಡಿದಾಗ ಮಾತ್ರ ಸಾಧ್ಯ?

ಉತ್ತರ ______________________

(ಊಟ, ನಿದ್ದೆ, ಪಾಠ, ದುಡಿಮೆ)

**ಈ) 'ಅ' ಪಟ್ಟಿಗೆ ಸರಿಹೊಂದುವ ಪದವನ್ನು 'ಬ' ಪಟ್ಟಿಯಿಂದ ಆರಿಸಿ ಬರೆಯಿರಿ.**

| 'ಅ' | 'ಬ' | ಉತ್ತರಗಳು |
|---|---|---|
| ೧. ಅಕ್ಷರ | ಕೊಬ್ಬರಿ | ______ |
| ೨. ಅರಿವೆ | ಜೇನುತುಪ್ಪ | ______ |
| ೩. ಅಕ್ಕಿ | ಅಂಗಿ | ______ |
| ೪. ತೆಂಗು | ಕವಿತೆ | ______ |
| ೫. ಬಂಡು | ಹೊಳೆ | ______ |
| | ಅನ್ನ | |

**ಉ) ಮೊದಲೆರಡು ಪದಗಳಿಗಿರುವ ಸಂಬಂಧದಂತೆ, ಮೂರನೇ ಪದಕ್ಕೆ ಸಂಬಂಧಿಸಿದ ಪದ ಬರೆಯಿರಿ.**

೧. ಹಣ್ಣಿನ ತಿರುಳು : ಸಿಪ್ಪೆಯ ಸುಲಿದರೆ : : ಕೊಬ್ಬರಿ : ______

೨. ಗಮಗಮ ಅನ್ನ : ಅಕ್ಕಿಯ ಕುದಿಸಲು : : ಚಂದದ ಅಂಗಿ : ______

೩. ಕವಿತಾ ಕಥೆ : ಅಕ್ಷರ ಕಲಿತರೆ : : ಪ್ರಶ್ನೆಗೆ ಉತ್ತರ : ______

## ಭಾಷಾಭ್ಯಾಸ

**ಅ) ಕೆಳಗಿನ ಅಕ್ಷರಗಳನ್ನು ಕ್ರಮವಾಗಿ ಜೋಡಿಸಿ ಅರ್ಥಪೂರ್ಣ ಪದವನ್ನು ರಚಿಸಿರಿ.**

***ಮಾದರಿ : ಗಿಕಾತೆಂಯಿನ : ತೆಂಗಿನ ಕಾಯಿ***

೧. ನುಪ್ಪಜೇತು : ______

೨. ಬಂನಹೂಡುವಿ : ______

೩. ಸತಂದವಿತ್ರ್ಯಸ್ವಾ : ______

ಆ) ಕೆಳಗಿನ ಪದಗಳಿಗೆ ಸಮಾನಾರ್ಥಕ ಪದವನ್ನು ಬರೆಯಿರಿ.

**ಮಾದರಿ :** ಹಣ್ಣು–ಫಲ

ನೀರು, ಹೂವು, ಜೇನು, ಕೆಲಸ, ಮಳೆ.

## ಭಾಷಾ ಚಟುವಟಿಕೆ

### ಭಾಗ–'ಅ'

ಅ) ಹನಿ ಹನಿ, ಬೇಗ ಬೇಗ, ಇಂತಹ ಒಂದೇ ಪದ ಎರಡು ಸಾರಿ ಪುನರಾವರ್ತನೆಗೊಳ್ಳುವ ಹತ್ತು ಪದಗಳನ್ನು ಬರೆಯಿರಿ.

______________________________

______________________________

ಆ) ಕೆಳಗಿನ ಪದಗಳಿಗೆ ಸರಿಯಾದ ಜೋಡಿ ಪದವನ್ನು ಆವರಣದಲ್ಲಿರುವ ಪದಗಳಿಂದ ಆಯ್ದು ಬರೆಯಿರಿ.

(ಪಾಠ, ಬರೆಹ, ಗೆಲುವು, ಪಕ್ಷಿ, ಇರುಳು, ಗದ್ದೆ, ಮೇಡು, ದುಮ್ಮಾನ, ಕರು, ಹಗಲು)

**ಮಾದರಿ:** ದನ– ಕರು

೧. ಓದು ______________

೨. ಸೋಲು ______________

೩. ಹೊಲ ______________

೪. ದುಃಖ ______________

೫. ಪಶು ______________

೬. ಕಾಡು ______________

೭. ಹಗಲು ______________

೮. ದನ ______________

ಇ) ಕೆಳಗಿನ ಚೌಕದಲ್ಲಿರುವ ಅಕ್ಷರಗಳನ್ನು ಎಡಕ್ಕೂ, ಬಲಕ್ಕೂ, ಮೇಲಕ್ಕೂ, ಕೆಳಕ್ಕೂ, ಓರೆಯಾಗಿ ಜೋಡಿಸಿ, ಚೌಕದಲ್ಲಿ ಅಡಗಿರುವ ವೃತ್ತಿಪರ ಶ್ರಮಜೀವಿಗಳನ್ನು ಮಾದರಿಯಲ್ಲಿ ತೋರಿಸಿರುವಂತೆ ಪತ್ತೆಹಚ್ಚಿ ಗುರುತಿಸಿರಿ.

| | | | | | | | | |
|---|---|---|---|---|---|---|---|---|
| ಬ | ಚ | ನ | ಯ | ಶ | ನ | ಲ | ಜ | ತ |
| ಡ | ಪ | ಮ್ಮಾ | ವ | ಸ | ಬ | ಬ | ಲ | ಪಾ |
| ಗಿ | ಒ | ಸ | ರ | ರೈ | ಗ | ಶ | ಗಾ | ಸ |
| ಋ | ಗ | ಅಂ | ದ | ತ | ಳ | ವಾ | ರ | ನೆ |
| ಅ | ಕ | ಮ | ಕ | ಚ | ಕುಂ | ನಿ | ಜೋ | ಕ್ಷಾ |
| ಟ | ಚ | ತ | ಧ | ಮ್ಮಾ | ಬಾ | ನಾ | ಮಿ | ಎ |
| ಕ್ಕ | ಹ | ನೇ | ಕಾ | ರ | ರ | ಗು | ಮ | ಕ |
| ಗ | ಮಾ | ರ | ಸ | ಮ | ಕೆ | ಗಾ | ಣಿ | ಗ |
| ಕೂ | ಲಿ | ಕಾ | ರ | ಣ | ಲ | ದೆ | ಹಾ | ರ |

ಈ) ದುಡಿಮೆಯ ಮಹತ್ವವನ್ನು ತಿಳಿಸುವ ಈ ಕೆಳಗಿನ ಗಾದೆಗಳನ್ನು ಓದಿ ಅವುಗಳ ಒಳಾರ್ಥಗಳನ್ನು ತಿಳಿಯಿರಿ.

೧. ಕೂತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು.

೨. ಕೈ ಕೆಸರಾದರೆ ಬಾಯಿ ಮೊಸರು.

೩. ಮಾಡಿದವ ಉಂಡ, ಮಲಗಿದವ ಕೆಟ್ಟ.

೪. ರಟ್ಟೆ ಮುರಿಯಬೇಕು, ರೊಟ್ಟಿ ತಿನ್ನಬೇಕು.

೫. ಆಳಾಗಿ ದುಡಿ, ಅರಸನಾಗಿ ಉಣ್ಣು.

೬. ಕಾಯಕವೇ ಕೈಲಾಸ.

೭. ಮಾಡಿದ್ದುಣ್ಣೋ ಮಹರಾಯ.

## ಭಾಗ 'ಆ'

ಅ) ಬೆಳಗಿನಿಂದ ರಾತ್ರಿಯವರೆಗೆ ನಿಮ್ಮ ಸುತ್ತಲಿನವರು ಮಾಡುವ ಕೆಲಸಗಳನ್ನು ಗಮನಿಸಿ, ಅವರ ಪರಿಶ್ರಮ ಹಾಗೂ ಅದರ ಫಲವನ್ನು ಪಟ್ಟಿಮಾಡಿ.

ಆ) ದುಡಿಮೆಯನ್ನು ಕುರಿತಂತೆ ರಚನೆಯಾಗಿರುವ ಕವನ ಮತ್ತು ವಚನಗಳನ್ನು ಸಂಗ್ರಹಿಸಿ ಓದಿರಿ.

## ವ್ಯಾಕರಣ

ಅಕ್ಷರಗಳನ್ನು ಒಂದು ಕ್ರಮದಲ್ಲಿ ಜೋಡಿಸುವ ಪದ್ಧತಿ ಹಿಂದಿನಿಂದಲೂ ರೂಢಿಯಲ್ಲಿ ಬಂದಿದೆ. ಕನ್ನಡ ಅಕ್ಷರಗಳ ಕ್ರಮಬದ್ಧ ಜೋಡಣೆಯೇ 'ಕನ್ನಡದ ವರ್ಣಮಾಲೆ'. ಇದು 'ಅ'ಕಾರದಿಂದ 'ಳ'ಕಾರದವರೆಗಿನ ೪೯ ಅಕ್ಷರಗಳನ್ನು ಒಳಗೊಂಡಿದೆ. ಕನ್ನಡ ವರ್ಣಮಾಲೆಯನ್ನು ಬರೆಯುವ ಕ್ರಮವನ್ನು ಗಮನಿಸಿ.

### ಕನ್ನಡ ಅಕ್ಷರ ಮಾಲೆ

ಅ ಆ ಇ ಈ ಉ ಊ ಋ ಎ ಏ ಐ

ಒ ಓ ಔ ಅಂ ಅಃ

ಕ ಖ ಗ ಘ ಙ

ಚ ಛ ಜ ಝ ಞ

ಟ ಠ ಡ ಢ ಣ

ತ ಥ ದ ಧ ನ

ಪ ಫ ಬ ಭ ಮ

ಯ ರ ಲ ವ ಶ ಷ ಸ ಹ ಳ



ಕನ್ನಡ ಅಕ್ಷರ ಮಾಲೆಯ ವಿಧಗಳು
ಸ್ವರಗಳು(೧೩)
ವ್ಯಂಜನಗಳು (೩೪)
ಯೋಗವಾಹಗಳು(೨)
ಅನುಸ್ವಾರ(೧)
ಂ
ವಿಸರ್ಗ(೧)
ಃ
ಹ್ರಸ್ವಸ್ವರ(೬)
ಅ ಇ ಉ ಋ ಎ ಒ
ದೀರ್ಘಸ್ವರ(೭)
ಆ ಈ ಊ ಏ ಐ ಓ ಔ
ವರ್ಗೀಯ ವ್ಯಂಜನಗಳು(೨೫)
ಕ್ ಖ್ ಗ್ ಘ್ ಙ್
ಚ್ ಛ್ ಜ್ ಝ್ ಞ್
ಟ್ ಠ್ ಡ್ ಢ್ ಣ್
ತ್ ಥ್ ದ್ ಧ್ ನ್
ಪ್ ಫ್ ಬ್ ಭ್ ಮ್
ಅವರ್ಗೀಯ ವ್ಯಂಜನಗಳು(೯)
ಯ್ ರ್
ಲ್ ವ್
ಶ್ ಷ್
ಸ್ ಹ್
ಳ್

# ೨. ಯಾರಿವನು?




– ಸಂಗ್ರಹ

**ಪ್ರವೇಶ :** ಭವ್ಯ ಪರಂಪರೆಯನ್ನು ಹೊಂದಿರುವ ಭಾರತದ ದುಸ್ಥಿತಿಗೆ ಮಮ್ಮಲ ಮರುಗುತ್ತಾ, ದೇಶದ ಹಿತಕ್ಕಾಗಿ ಚಿಂತಿಸುತ್ತಾ, ನಿಸ್ವಾರ್ಥದಿಂದ ಶ್ರಮಿಸಿದವರ ಜೀವನ ಆದರ್ಶವಾದುದು. ಹಸಿವಿಲ್ಲದ, ದಾರಿದ್ರ್ಯವಿಲ್ಲದ ಸಮಾಜ ನಿರ್ಮಾಣವೇ ನಿಜವಾದ ಸಮಾಜಸೇವೆ. 'ದೀನ ದಲಿತರ ಉದ್ಧಾರವೇ ದೇಶೋದ್ಧಾರ' ಎಂದು ಶ್ರಮಿಸಿದ ಮಹನೀಯರ ಜೀವನ ಅನುಕರಣೀಯ. 'ದರಿದ್ರ ನಾರಾಯಣನ ಸೇವೆಯೇ ನನ್ನ ಗುರಿ' ಎಂಬ ತತ್ವಕ್ಕೆ ಬದ್ಧರಾಗಿ ಬಾಳಿದ ಸ್ವಾಮಿ ವಿವೇಕಾನಂದರ ಆಲೋಚನೆ, ಚಿಂತನೆಗಳು ಎಲ್ಲರಿಗೂ ದಾರಿದೀಪ. ವಿವೇಕಾನಂದರ ವ್ಯಕ್ತಿತ್ವವನ್ನು ಚಿತ್ರಕಥೆಯ ಮೂಲಕ ಪರಿಚಯ ಮಾಡಿಸಲಾಗಿದೆ.





ಒಂದು ಉಷಃಕಾಲ ಮಾಗಿಯ ಮಂಜಿನ ಸೋನೆ ಸುರಿಯುತ್ತಿತ್ತು. ಪ್ರಶಾಂತ ವಾತಾವರಣದಲ್ಲಿ ಕನ್ಯಾಕುಮಾರಿ ದೇವಸ್ಥಾನದ ಬಾಗಿಲುಗಳು ತೆರೆದಿದ್ದವು. ಆ ದಿನದ ಕಾರ್ಯದಲ್ಲಿ ತೊಡಗಿದ್ದ ಪೂಜಾರಿಗಳು ಚಕಿತರಾಗಿ ಬಾಗಿಲಕಡೆ ನೋಡಿದರು. ಅವರು ಹಿಂದೆಂದು ಕಂಡಿರದಂತಹ ದಿವ್ಯತೇಜಸ್ಸಿನ ಸನ್ಯಾಸಿಯೊಬ್ಬ ದೇವಾಲಯವನ್ನು ಪ್ರವೇಶಿಸಿದನು. ದೇವಿಯ ಮುಂದೆ ಧ್ಯಾನಾರೂಢನಾಗಿ, ನಂತರ ಸಮುದ್ರದ ಕಡೆಗೆ ನಡೆದನು.



ಕನ್ಯಾಕುಮಾರಿಯ ಸಮುದ್ರ ತೀರದಲ್ಲಿ ನಿಂತು ಆ ಸನ್ಯಾಸಿ ಭಾವಪರವಶನಾಗಿ ಸುತ್ತಲೂ ನೋಡಿದನು. ಮುಂದುಗಡೆ ವಿಸ್ತಾರವಾದ ಮಹಾಸಾಗರ. ಹಿಂದುಗಡೆ ಭಿನ್ನ ಭಿನ್ನ ಆಹಾರ, ಭಾಷೆ, ಸಂಸ್ಕೃತಿ, ಪ್ರದೇಶ ಹಾಗೂ ಅಭಿರುಚಿಗಳಿಂದ ಕೂಡಿದ ಭಾರತ. ಆದರೂ ಎಲ್ಲರೂ ಒಂದೇ ಎಂಬ ಭಾವನೆಯಿರುವ ಸಮುದಾಯಗಳಿಂದ ಕೂಡಿದ ದೇಶ.

ಸೂರ್ಯರಶ್ಮಿಯ ಸಂಗದಲ್ಲಿ ಮಂಜಿನ ತೆರೆ ಸರಿಯುತ್ತಿದ್ದಂತೆ ಸಮುದ್ರದಲ್ಲಿ ಹೆಬ್ಬಂಡೆಯೊಂದು ಕಾಣುತ್ತಿದೆ. ಆವೇಶವಶನಾದ ಆ ವೀರಸನ್ಯಾಸಿ ಭೋರ್ಗರೆವ ಕಡಲಲ್ಲಿ ಧುಮುಕಿ ಈಜ ತೊಡಗಿದನು. ಸಮುದ್ರ ತೀರದಲ್ಲಿದ್ದ ಒಬ್ಬಿಬ್ಬರು ಕಾಷಾಯಧಾರಿಯ ಈ ಸಾಹಸಕ್ಕೆ ಮೂಕವಿಸ್ಮಿತರಾದರು.





ಬಂಡೆಯನ್ನೇರಿದ ಈ ಸನ್ಯಾಸಿ ವನಕೇಸರಿಯಂತೆ ಸುತ್ತಲೂ ದಿಟ್ಟಿಸಿ ನೋಡಿದನು. ಎಡಬಲಗಳಲ್ಲಿ ಸಮುದ್ರ. ಹಿಂದೆ ಮಹಾಸಾಗರ. ಮುಂದುಗಡೆ ವಿಶಾಲವಾದ ಜನ್ಮಭೂಮಿ. ಕಡಲಲೆಗಳು ಎಲ್ಲಾದಿಕ್ಕಿನಿಂದ ಬಂದು ಸನ್ಯಾಸಿಯ ಪಾದಗಳಿಗೆ ಮುತ್ತಿಡುತ್ತಿವೆ.

ತೀರದ ವನಸೌಂದರ್ಯದಿಂದ ಪ್ರಫುಲ್ಲನಾದ ರಾಜಯೋಗಿ ಪದ್ಮಾಸನಾರೂಢನಾದನು. ಒಮ್ಮೆ ಬುದ್ಧನಂತೆಯೂ, ಮತ್ತೊಮ್ಮೆ ಮಹಾವೀರನಂತೆಯೂ ಕಂಡರೆ ಇನ್ನೊಮ್ಮೆ ಹಸುಳೆಯಂತೆ ಕಂಬನಿ ತುಂಬಿ ಬಡಬಡಿಸುವನು.





ಭರತ ಖಂಡದ ಇತಿಹಾಸ, ಧರ್ಮಗಳು, ಮಹಾತತ್ವಗಳು, ಕವಿವರ್ಯರು, ಬುದ್ಧ, ರಾಮ, ಶಂಕರಾಚಾರ್ಯರು ಹಾಗೂ ವಿವಿಧ ಧರ್ಮಗಳ ಆಚರಣೆಗಳೆಲ್ಲವೂ ಮಹಾಯೋಗಿಯ ಮನದಲ್ಲಿ ಚಿತ್ರಗಳಂತೆ ಚಲಿಸತೊಡಗಿದವು.

"ಹೇ ಜನನಿ ಗೊಡ್ಡು ಪದ್ಧತಿಗಳನ್ನೇ ನಾವಿಂದು ಧರ್ಮವೆಂದು ಭ್ರಮಿಸಿ ಆಚರಿಸುತ್ತಿದ್ದೇವೆ. ಜಾತಿಭೇದಗಳ ಕ್ರೌರ್ಯದಿಂದ ಮೇಲೆದ್ದವರ ಅಹಂಕಾರದಿಂದ ಪಂಡಿತರ ಸ್ವಾರ್ಥದಿಂದ ನೀನು ಕಳೆಗುಂದಿ ಕಣ್ಣೀರಿಡುತ್ತಿಹೆ. ನಮ್ಮ ಈ ಪಾಪಗಳನ್ನು ಮನ್ನಿಸು"





"ಲಕ್ಷಾಂತರ ಸನ್ಯಾಸಿಗಳು ಇಲ್ಲಿ ನಾವೇನು ಮಾಡುತ್ತಿದ್ದೇವೆ? ಹೊಟ್ಟೆಗಿಲ್ಲದೆ, ವಸ್ತ್ರವಿಲ್ಲದೆ ಕಂಗೆಟ್ಟ ದೇಶದಲ್ಲಿ ನಾವು ತತ್ವಬೋಧನೆ ಮಾಡುತ್ತಿದ್ದೇವೆ? ಅಯ್ಯೋ ಕಪಟವೃತ್ತಿಯೇ."

"ಐಶ್ವರ್ಯದಲ್ಲಿ ಓಲಾಡುತ್ತಿರುವ ಪಶ್ಚಿಮದೇಶಗಳಿಗೆ ಹೋಗಿ ನನ್ನ ಮೇಧಾಶಕ್ತಿಯಿಂದ ಹಣ ಸಂಪಾದಿಸಿ ಈ ದೇಶದ ಬಡವರ ಸೇವೆ ಮಾಡುವೆನು. ದರಿದ್ರರೇ ನನ್ನ ದೇವರು ದರಿದ್ರ ದೇವೋಭವ" ಎಂದು ಗಂಭೀರ ವಾಣಿಯಿಂದ ಆ ಸನ್ಯಾಸಿ ನುಡಿದನು.







ಕಲ್ಲು ಬಂಡೆಯ ಮೇಲೆ ಕಲ್ಲಿನಂತೆ ನಿಂತ ಸುಂದರ ಗಂಭೀರ ಮೂರ್ತಿಗೆ ಸಮುದ್ರರಾಜ ವಂದಿಸುವಂತೆ ಭಾಸವಾಗಿ ಸಮುದ್ರ ಪಕ್ಷಿಗಳು ವಿಸ್ಮಯದಿಂದ "ಯಾರಿವನು?" ಎಂದು ಯೋಚಿಸತೊಡಗಿದವು.

ಕ್ಷೇತ್ರ :- ಮಾತನಾಡುವುದು, ಆಲೋಚಿಸುವುದು.
ಸಾಮರ್ಥ್ಯ :- ಅಕ್ಷರ ಹಾಗೂ ಪದಗಳನ್ನು ಸರಿಯಾಗಿ ಉಚ್ಚರಿಸುವುದು. ಬೇರೆ ಬೇರೆ ರೀತಿಯ ವಾಕ್ಯಗಳನ್ನು ಪರಿಚಯ ಮಾಡಿಕೊಳ್ಳುವುದು.

**ಪದಗಳ ಅರ್ಥ :**

ಆರ್ಯ – ಹಿರಿಯ, ವೃದ್ಧ, ಆಚಾರ್ಯ;

ಕಂಗೆಡು – ಗಾಬರಿಯಾಗು, ದಿಕ್ಕು ತೋಚದಂತಾಗು;

ಕಡಲು – ಸಮುದ್ರ, ಸಾಗರ;

ಕಾಷಾಯ – ಕಾವಿಬಟ್ಟೆ;

ಚಕಿತ – ಬೆರಗುಗೊಂಡ ವ್ಯಕ್ತಿ, ವಿಸ್ಮಿತನಾದವನು, ಗಾಬರಿಗೊಂಡವನು;

ತರಂಗ – ಅಲೆ;

ತೇಜ – ಹೊಳಪು, ಕಾಂತಿ;

ದರಿದ್ರ – ಬಡವ, ಧನಹೀನ, ಬಡತನ, ದಾರಿದ್ರ್ಯ, ಬರ, ಕೊರತೆ;

ದಿವ್ಯ – ಶ್ರೇಷ್ಠವಾದುದು, ಉತ್ತಮವಾದುದು;

ಮಾಗಿಯ ಕಾಲ – ಚಳಿಗಾಲ, ಶಿಶಿರಋತು;

ಮುಗಿಲು – ಮೋಡ, ಮೇಘ, ಆಕಾಶ, ಬಾನು;

ವಿಸ್ಮಯ – ಆಶ್ಚರ್ಯ, ಅಚ್ಚರಿ;

ಸಜ್ಜನ – ಒಳ್ಳೆಯ ನಡವಳಿಕೆ ಇರುವವರು.

## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ**

೧. ಕನ್ಯಾಕುಮಾರಿ ದೇವಾಲಯದ ಪೂಜಾರಿಗಳು ಚಕಿತರಾಗಿದ್ದೇಕೆ?

____________________

೨. ದಿವ್ಯತೇಜಸ್ಸಿನ ಸನ್ಯಾಸಿ ದೇವಾಲಯದಿಂದ ಎಲ್ಲಿಗೆ ಹೋದನು?

____________________

೩. ಬಂಡೆಯ ಮೇಲೆ ನಿಂತು ಸುತ್ತಲೂ ನೋಡಿದ ಸನ್ಯಾಸಿಗೆ ಕಂಡಿದ್ದೇನು?

೪. ತೀರದಲ್ಲಿದ್ದವರು ವಿಸ್ಮಿತರಾಗಿದ್ದೇಕೆ?

೫. ಆರ್ಯಭೂಮಿ ಎಂದು ಯಾವುದನ್ನು ಕರೆದಿದ್ದಾರೆ?

೬. ವೀರ ಸನ್ಯಾಸಿಯ ಪಾದಗಳಿಗೆ ಮುತ್ತಿಟ್ಟಿದ್ದು ಯಾವುದು?

೭. ಸುಂದರ ಗಂಭೀರ ಮೂರ್ತಿಗೆ ವಂದಿಸಿದವರು ಯಾರು?

**ಆ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಎರಡು-ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಭಾವಪರವಶನಾಗಿ ನೋಡಿದ ಸನ್ಯಾಸಿಗೆ ಕಂಡದ್ದು ಏನು?

೨. ಪದ್ಮಾಸನಾರೂಢನಾದ ರಾಜಯೋಗಿಯು ಯಾವ ರೀತಿ ಕಾಣುತ್ತಿದ್ದನು?

೩. ವಿವೇಕಾನಂದರನ್ನು ಯಾವ ಯಾವ ಹೆಸರುಗಳಿಂದ ಕರೆದಿದ್ದಾರೆ?

೪. ಮಹಾಯೋಗಿಯ ಮನದಲ್ಲಿ ಚಲಿಸತೊಡಗಿದ ಚಿತ್ರಗಳಾವುವು?

________________________________________

________________________________________

________________________________________

೫. ಸನ್ಯಾಸಿಗಳು ಮಾಡುತ್ತಿರುವ ತತ್ವ ಬೋಧನೆಯನ್ನು ಕಪಟವೃತ್ತಿ ಎಂದು ಏಕೆ ಕರೆದಿದ್ದಾರೆ?

________________________________________

________________________________________

________________________________________

**ಇ) ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು? ಏಕೆ ಹೇಳಿದರು?**

೧. "ನಮ್ಮ ಈ ಪಾಪಗಳನ್ನು ಮನ್ನಿಸು"

________________________________________

________________________________________

________________________________________

೨. "ನೀನು ಕಳೆಗುಂದಿ ಕಣ್ಣೀರಿಡುತ್ತಿಹ"

________________________________________

________________________________________

________________________________________

೩. "ನನ್ನ ಮೇಧಾಶಕ್ತಿಯಿಂದ ಹಣ ಸಂಪಾದಿಸುತ್ತೇನೆ"

________________________________________

________________________________________

________________________________________

೪. "ದರಿದ್ರರೇ ನನ್ನ ದೇವರು, ದರಿದ್ರ ದೇವೋಭವ"

________________________________________

________________________________________

________________________________________

೫. "ಯಾರಿವನು?"

________________________________________

________________________________________

________________________________________

## ಭಾಷಾಭ್ಯಾಸ

**ಅ) ಕೆಳಗಿನ ಪದಗಳನ್ನು ಬಳಸಿ ವಾಕ್ಯ ರಚಿಸಿರಿ.**

೧. ವಿಸ್ಮಯ =

೨. ಭರತ ಖಂಡ =

೩. ಮಹಾಪರ್ವತ =

೪. ಸ್ವಾರ್ಥ =

೫. ಸಜ್ಜನ =

**ಆ) ಕೆಳಗಿನ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಿ ಬರೆಯಿರಿ.**

೧. ಸನ್ಯಾಸಿ ..........................................

೨. ದಿವ್ಯತೇಜಸ್ಸು ..........................................

೩. ಧ್ಯಾನಾರೂಢ ..........................................

೪. ಸಂಸ್ಕೃತಿ ..........................................

೫. ಅರುಣೋದಯ ..........................................

೬. ಪದ್ಮಾಸನಾರೂಢ ..........................................

೭. ಪ್ರಫುಲ್ಲ ..........................................

## ಭಾಷಾ ಚಟುವಟಿಕೆ

### ಭಾಗ–'ಅ'

**ಢಂ ಢಂ ಆಟ**

ವೃತ್ತಾಕಾರದಲ್ಲಿ ನಿಂತಿರುವ ಎಲ್ಲರ ಕೈಯಲ್ಲಿ ಒಂದೊಂದು ಅಕ್ಷರ ಬರೆದ ಮಿಂಚು ಫಲಕವಿರಲಿ. ಮಧ್ಯದಲ್ಲಿ ನೆಲದ ಮೇಲೆ 'O' (ಸೊನ್ನೆ, ಅನುಸ್ವಾರ) ಬರೆಯಿರಿ. ಪ್ರಾರಂಭಕ್ಕೆ ಒಬ್ಬರು ತಮ್ಮಲ್ಲಿರುವ ಅಕ್ಷರಕ್ಕೆ ಅನುಸ್ವಾರ ಸೇರಿಸಿ ಜೋರಾಗಿ ಓದಲಿ, ಅನಂತರ ಇನ್ನೊಬ್ಬರ ಕಡೆ ಬೆರಳು ತೋರಿಸಲಿ. ಅವರೂ ತಮ್ಮಲ್ಲಿರುವ ಅಕ್ಷರದೊಂದಿಗೆ ಅನುಸ್ವಾರ ಸೇರಿಸಿ ಜೋರಾಗಿ ಓದಲಿ. ಸರಿಯಾಗಿ ಓದದವರು ಆಟದಿಂದ ಹೊರಕ್ಕೆ ಹೋಗಲಿ.

**ಮಾದರಿ :** ಮಂ






### ಭಾಗ–'ಆ'

ಅ) ಕಥನಚಿತ್ರ (ಕಾಮಿಕ್ಸ್), ಚಂದಮಾಮ, ಬಾಲಮಿತ್ರ ಮುಂತಾದ ಪುಸ್ತಕಗಳನ್ನು ಸಂಗ್ರಹಿಸಿರಿ, ಓದಿ ಗ್ರಹಿಸಿದ್ದನ್ನು ಕಥಾ ರೂಪದಲ್ಲಿ ತರಗತಿಯಲ್ಲಿ ಹೇಳಿರಿ.

ಆ) ವಿವೇಕಾನಂದರನ್ನು ಕುರಿತ ಪುಸ್ತಕಗಳನ್ನು ಓದಿರಿ.

ಇ) ತರಗತಿಯಲ್ಲಿ ಶಿಕ್ಷಕರ ಮಾರ್ಗದರ್ಶನದಲ್ಲಿ ಆಶುಭಾಷಣ ಹಾಗೂ ರಸಪ್ರಶ್ನೆ ಕಾರ್ಯಕ್ರಮವನ್ನು ನಡೆಸಿರಿ.

ಈ) ವಿವೇಕಾನಂದರ ಸಂದೇಶಗಳನ್ನು ಸಂಗ್ರಹಿಸಿರಿ.

# ವ್ಯಾಕರಣ

**ಸ್ವರಗಳು** : ಸ್ವತಂತ್ರವಾಗಿ ಉಚ್ಚರಿಸುವ ಅಕ್ಷರಗಳು. ಸ್ವರಗಳಲ್ಲಿ ಎರಡು ವಿಧಗಳಿವೆ.

೧. **ಹ್ರಸ್ವಸ್ವರ** : ಒಂದು ಮಾತ್ರಾ ಕಾಲದಲ್ಲಿ ಉಚ್ಚರಿಸುವ ಅಕ್ಷರಗಳು (೬)

ಅ ಇ ಉ ಋ ಎ ಒ

೨. **ದೀರ್ಘಸ್ವರ** : ಎರಡು ಮಾತ್ರಾ ಕಾಲದಲ್ಲಿ ಉಚ್ಚರಿಸುವ ಅಕ್ಷರಗಳು (೭)

ಆ ಈ ಊ ಏ ಐ ಓ ಔ

**ಮಾತ್ರಾ ಕಾಲ** : ಒಂದು ಅಕ್ಷರವನ್ನು ಉಚ್ಚರಿಸಲು ಬೇಕಾಗುವ ಕಾಲಪ್ರಮಾಣ.

**ಯೋಗವಾಹ** : ಒಂದು ಸ್ವರದ ಸಂಬಂಧವನ್ನು ಹೊಂದಿದ ಮೇಲೆಯೇ ಉಚ್ಚರಿಸಲು ಬರುವ ಅಕ್ಷರಗಳೇ ಯೋಗವಾಹಗಳು. ಇವುಗಳಲ್ಲಿ ಎರಡು ವಿಧಗಳಿವೆ.

| | |
|---|---|
| ೧. ಂ = ಅನುಸ್ವಾರ<br>(ಒಂದು ಅಕ್ಷರಗಾತ್ರದ ಸೊನ್ನೆ)<br>**ಉದಾ :** ಅಂಗಳ | ೨. ಃ = ವಿಸರ್ಗ<br>(ಎರಡು ಸಣ್ಣ ಸೊನ್ನೆಗಳು ಒಂದರ ಕೆಳಗೆ ಒಂದು)<br>**ಉದಾ :** ದುಃಖ |

# ೩. ಮರಗಳ ಮನವಿ




- ಜಯವಂತ ಕಾಡದೇವರ

**ಪ್ರವೇಶ :**

ಸಸ್ಯಗಳಿಗೂ ಮಾನವನಿಗೂ ನಿಕಟವಾದ ಸಂಬಂಧವಿದೆ. ಗಿಡ, ಮರ, ಕೆರೆ, ನದಿ, ಕೀಟ, ಪಕ್ಷಿ, ಪ್ರಾಣಿ ಮುಂತಾದವುಗಳು ಸಮತೋಲನದಲ್ಲಿದ್ದರೆ ಮಾನವನ ಜೀವನವು ಸುಗಮ ಹಾಗೂ ಸುರಕ್ಷಿತವಾಗಿರುತ್ತದೆ. ಆದುದರಿಂದ ನಮ್ಮ ಪರಿಸರದಲ್ಲಿ ಗಿಡ, ಮರಗಳನ್ನು ಬೆಳೆಸಿ, ರಕ್ಷಿಸಬೇಕು.



ಕಲ್ಲನು ಎಸೆದರೂ ಹಣ್ಣನೇ ಕೊಡುವ
ಬಿಸಿಲಲಿ ನಿಂತರೂ ನೆರಳನೇ ನೀಡುವ
ಹಕ್ಕಿ ಸಂಕುಲಕೆ ಆಶ್ರಯವಾಗಿರುವ
ಭೂಮಿ ತಾಯಿಗೆ ಹಸಿರನು ಉಡಿಸುವ
ನಮ್ಮನ್ನೇತಕೆ ಕಡಿಯುವಿರಿ?

ನಮ್ಮಿಂದಲ್ಲವೇ ಇಳೆ-ಬೆಳೆ ಹಸಿರು
ನಮ್ಮಿಂದಲ್ಲವೇ ಜೀವಕೆ ಉಸಿರು
ನಮ್ಮಿಂದಲ್ಲವೇ ಎಲ್ಲೆಡೆ ಚೇತನ
ನಮ್ಮೊಡನೇತಕೆ ನಿಮ್ಮಯ ಹಗೆತನ
ನಮ್ಮನ್ನೇತಕೆ ಕಡಿಯುವಿರಿ?

ಇಲ್ಲಿದೆ ಗಿಳಿಗಳ ಸಿಹಿಸಿಹಿ ಮಾತು
ಕೋಗಿಲೆ ಹಾಡಿನ ನಾದದಿ ಬೆರೆತು
ಕೇಳುವಿರೆಲ್ಲರೂ ನೆರಳಲಿ ಕುಳಿತು
ನಲಿವಿರಿ ನಿಮ್ಮಯ ನೋವನು ಮರೆತು
ನಮ್ಮನ್ನೇತಕೆ ಕಡಿಯುವಿರಿ?

ಪರಿಸರದಲ್ಲಿನ ವಿಷಾನಿಲ ಹೀರುವ
ಪರಿಶುದ್ಧ ಗಾಳಿಯ ಕಂಪನು ಬೀರುವ
ಓಝೋನಿನ ಪದರಿನ ರಕ್ಷಣೆ ಮಾಡುವ
ಜೀವಲೋಕಕೆ ಪ್ರಾಣವೇ ಆಗಿಹ
ನಮ್ಮನ್ನೇತಕೆ ಕಡಿಯುವಿರಿ?

ಮನುಜರೆ ಕೇಳಿರಿ ದಯವಿಟ್ಟು
ಮರಗಳ ಮನವಿಯನೊಂದಿಷ್ಟು
ಉಳಿಸಿರಿ ಬೆಳೆಸಿರಿ ಕಾಡನ್ನು
ರಕ್ಷಿಸಿಕೊಳ್ಳಿರಿ ನಿಮ್ಮನ್ನು
ಕಡಿಯಬೇಡಿರಿ ನಮ್ಮನ್ನು.





*ಗಿಡಮರಗಳನ್ನು ಪ್ರೀತಿಸಿರಿ. ಪರಿಸರ ಸಂರಕ್ಷಣೆ ನಮ್ಮೆಲ್ಲರ ಹೊಣೆ.*

**ಕೃತಿಕಾರರ ಪರಿಚಯ:**



ಜಯವಂತ ಕಾಡದೇವರು ಬಾಗಲಕೋಟೆ ಜಿಲ್ಲೆಯ ಜಮಖಂಡಿಯವರು. ೩೪ ವರ್ಷಗಳ ಕಾಲ ಬನಹಟ್ಟಿಯ ಎಸ್. ಆರ್. ಎ. ಕಾಲೇಜಿನಲ್ಲಿ ಇತಿಹಾಸ ಉಪನ್ಯಾಸಕರಾಗಿ ಸೇವೆಗೈದಿದ್ದಾರೆ. ಮಕ್ಕಳಿಗಾಗಿ 'ಮಾತಾಡುವ ಗಿಳಿ', 'ಬನ್ನಿರಿ ಮಕ್ಕಳೆ ಕಥೆ ಹೇಳುವೆ', 'ದೇಶ ಕಟ್ಟೋಣ ಬನ್ನಿ' ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರ 'ಮರಗಳ ಮನವಿ' ಪುಸ್ತಕಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನ ಬಂದಿದೆ. ಪ್ರಸ್ತುತ ಪದ್ಯವನ್ನು **'ಮರಗಳ ಮನವಿ'** ಎಂಬ ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ.

**ಕ್ಷೇತ್ರ** : ಆಲಿಸುವುದು.

**ಸಾಮರ್ಥ್ಯ** : ಪದ್ಯದಲ್ಲಿರುವ ಸರಳ ಮಾಹಿತಿಯನ್ನು ಸಂಗ್ರಹಿಸಿ, ಯಾರು? ಯಾವಾಗ? ಎಲ್ಲಿ? ಪ್ರಶ್ನೆಗಳಿಗೆ ಉತ್ತರಿಸುವುದು.

**ಪದಗಳ ಅರ್ಥ :**

ಇಳೆ – ಭೂಮಿ, ಧರಣಿ, ಪೃಥ್ವಿ, ಧರೆ;

ಕಂಪು – ಸುಗಂಧ, ಪರಿಮಳ, ಸುವಾಸನೆ;

ಚೇತನ – ಜೀವ, ಚೈತನ್ಯ;

ಮನವಿ – ಕೋರಿಕೆ, ಬೇಡಿಕೆ, ಅರಿಕೆ;

ವಿಷಾನಿಲ – ವಿಷದಿಂದ ಕೂಡಿರುವ ಗಾಳಿ;

ಸಂಕುಲ – ಸಮೂಹ, ಗುಂಪು;

ಹಗೆತನ – ಶತ್ರುತ್ವ, ವೈರತ್ವ.

**ಟಿಪ್ಪಣಿ:**

**ಓಝೋನ್ ಪದರ**–ಸೂರ್ಯನ ನೇರಳಾತೀತ ಕಿರಣಗಳಿಂದ ಜೀವಿಗಳನ್ನು ರಕ್ಷಿಸುವ ಒಂದು ರಕ್ಷಾಕವಚ.

## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ಮರವು ಯಾರಿಗೆ ಆಶ್ರಯವಾಗಿದೆ ಎಂದು ಕವಿ ಹೇಳಿದ್ದಾರೆ?

______________________________

೨. ಭೂಮಿಗೆ ಹಸಿರನ್ನು ಉಡಿಸುವವರು ಯಾರೆಂದು ಕವಿ ಹೇಳಿದ್ದಾರೆ?

________________________________________

೩. ಇಂಪಾಗಿ ಹಾಡುವ ಪಕ್ಷಿ ಯಾವುದು?

________________________________________

೪. ಸಿಹಿ ಮಾತನಾಡುವ ಪಕ್ಷಿ ಯಾವುದು?

________________________________________

೫. ಪರಿಸರದಲ್ಲಿನ ವಿಷಾನಿಲವನ್ನು ಹೀರುವ ಪದರ ಯಾವುದು?

________________________________________

**ಆ) ಕೆಳಗಿನ ಪದ್ಯವನ್ನು ಪೂರ್ಣಗೊಳಿಸಿರಿ.**

ಇಲ್ಲಿದೆ ಗಿಳಿಗಳ ______________________

______________________________

______________________________

________________________ ಕಡಿಯುವಿರಿ?



**ಇ) ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಮರಗಳ ಉಪಯೋಗಗಳೇನು?

________________________________________

________________________________________

________________________________________

೨. ಇತ್ತೀಚಿನ ದಿನಗಳಲ್ಲಿ ಹೆಚ್ಚು ಸೆಕೆ ಎನಿಸುತ್ತಿದೆ ಏಕೆ?

________________________________________

________________________________________

________________________________________

೩. ಮರಗಳು ಮನುಜರಿಗೆ ಏನೆಂದು ಮನವಿ ಮಾಡುತ್ತವೆ?

________________________________________

________________________________________

________________________________________

೪. ನಮ್ಮೊಡನೇತಕೆ ಹಗೆತನ ಎಂದು ಮರವು ಏಕೆ ಕೇಳುತ್ತಿದೆ?

________________________________________

________________________________________

________________________________________



## ಭಾಷಾಭ್ಯಾಸ

### ಅ) ಕೆಳಗಿನ ಪ್ರಾಸಪದಗಳನ್ನು ಓದಿರಿ.

ಇಳೆ – ಬೆಳೆ ಹಸಿರು – ಉಸಿರು

ಬೆರೆತು – ಮರೆತು ಚೇತನ – ಹಗೆತನ

### ಆ) ಕೆಳಗಿನವುಗಳಿಗೆ ಪ್ರಾಸಪದಗಳನ್ನು ಬರೆಯಿರಿ.

೧. ಕೊಡುವ – ______________ ೩. ನಿಮ್ಮನ್ನು – ______________

೨. ಕುಳಿತು – ______________ ೪. ಹೀರುವ – ______________

## ಭಾಷಾ ಚಟುವಟಿಕೆ

## ಭಾಗ-'ಅ'

**ಅ) ಕೆಳಗಿನವುಗಳಿಗೆ ಸೂಕ್ತ ಪದಗಳನ್ನು ತುಂಬಿರಿ :**

೧. ಕಲ್ಪವೃಕ್ಷವೆಂದು ಕರೆಯಲ್ಪಡುವ ಮರ ತೆಂ ☐ ☐ ☐ ರ.

೨. ವಿದ್ಯಾರ್ಥಿಗಳ ಸಂಗಾತಿ ಪಠ್ಯ ☐ ☐ ☐

೩. ಕನ್ನಡದ ಮೊದಲ ರಾಷ್ಟ್ರಕವಿ ಗೋ ☐ ☐ ☐

೪. ಪ್ರತಿ ದಿನ ಹಲವಾರು ಸುದ್ದಿಗಳನ್ನು ಇದರಿಂದ ತಿಳಿಯುತ್ತೇವೆ
ದಿ ☐ ☐ ☐ ಕೆ.

**ಆ) ಕೆಳಗಿನವುಗಳಿಗೆ ಪ್ರಾಸಪದಗಳನ್ನು ಬರೆಯಿರಿ.**

೧. ಗೆಜ್ಜೆ – ________ ೩. ಹೀರುವ – ________

೨. ಸಿಹಿ – ________ ೪. ನಲಿವು – ________



**ಇ) ಕೆಳಗಿನ ಪದಗಳ ಅರ್ಥವ್ಯತ್ಯಾಸ ತಿಳಿಯಿರಿ.**

೧. ನಗೆ – ನೆಗೆ ೪. ಹುಲಿ – ಹುಳಿ

೨. ಹುಸಿ – ಹಸಿ ೫. ಒಲೆ – ಓಲೆ

೩. ಕೆರೆ – ಕರೆ ೬. ದನ – ಧನ

**ಈ) ಗುಂಪಿಗೆ ಸೇರದ ಪದ ಗುರುತಿಸಿ ಬರೆಯಿರಿ.**

೧. ಇಳೆ, ಭಾನು, ಭೂಮಿ, ಪೃಥ್ವಿ = ________

೨. ನಲಿವು, ಸಂತೋಷ, ನೋವು, ಆನಂದ = ________

೩. ಇಂಪು, ಕಂಪು, ಸುಗಂಧ, ಸುವಾಸನೆ = ________

೪. ನಾಡು, ಅಡವಿ, ಕಾಡು, ಅರಣ್ಯ = ________

## ಭಾಗ–'ಆ'

೧. ಹಣ್ಣನ್ನು ಕೊಡುವ ಮರಗಳ ಹೆಸರುಗಳನ್ನು ಪಟ್ಟಿ ಮಾಡಿರಿ.
೨. ವಿವಿಧ ರೀತಿಯ ಎಲೆಗಳನ್ನು ಸಂಗ್ರಹಿಸಿ ಅಭ್ಯಾಸ ಪುಸ್ತಕಕ್ಕೆ ಅಂಟಿಸಿ ಯೋಜನೆ ತಯಾರಿಸಿರಿ.
೩. ಔಷಧಿ ಸಸ್ಯಗಳನ್ನು ಪಟ್ಟಿ ಮಾಡಿ ಅವುಗಳ ಉಪಯೋಗಗಳನ್ನು ಶಿಕ್ಷಕರೊಂದಿಗೆ ಚರ್ಚಿಸಿರಿ.
೪. ಮರದ ಅಂದವಾದ ಚಿತ್ರ ಬರೆದು ಅದರ ವಿವಿಧ ಭಾಗಗಳನ್ನು ಗುರುತಿಸಿರಿ.
೫. ಮರಗಳನ್ನು ಕಡಿಯುವುದರಿಂದ ಉಂಟಾಗುವ ದುಷ್ಪರಿಣಾಮಗಳ ಬಗ್ಗೆ ಐದಾರು ವಾಕ್ಯಗಳಲ್ಲಿ ಬರೆಯಿರಿ.

## ವ್ಯಾಕರಣ

**ವ್ಯಂಜನಗಳು :** ಸ್ವರಗಳ ಸಹಾಯದಿಂದ ಉಚ್ಚರಿಸುವ ಅಕ್ಷರಗಳು.

ವ್ಯಂಜನಗಳು – ೩೪

ವರ್ಗೀಯ ವ್ಯಂಜನಗಳು (೨೫)
ವರ್ಗೀಕರಿಸಲು ಬರುವ ಅಕ್ಷರಗಳು

ಅವರ್ಗೀಯ ವ್ಯಂಜನಗಳು (೯)
ವರ್ಗೀಕರಿಸಲು ಬರದ ಅಕ್ಷರಗಳು



**ವರ್ಗೀಯ ವ್ಯಂಜನಗಳು :**

| ಕ್ರ.ಸಂ | ವರ್ಗಗಳು | ಅಲ್ಪಪ್ರಾಣ | ಮಹಾಪ್ರಾಣ | ಅಲ್ಪಪ್ರಾಣ | ಮಹಾಪ್ರಾಣ | ಅನುನಾಸಿಕ | ಅಕ್ಷರ ಸಂಖ್ಯೆ |
|---|---|---|---|---|---|---|---|
| ೧ | ಕವರ್ಗ | ಕ್ | ಖ್ | ಗ್ | ಘ್ | ಙ್ | ೫ |
| ೨ | ಚವರ್ಗ | ಚ್ | ಛ್ | ಜ್ | ಝ್ | ಞ್ | ೫ |
| ೩ | ಟವರ್ಗ | ಟ್ | ಠ್ | ಡ್ | ಢ್ | ಣ್ | ೫ |
| ೪ | ತವರ್ಗ | ತ್ | ಥ್ | ದ್ | ಧ್ | ನ್ | ೫ |
| ೫ | ಪವರ್ಗ | ಪ್ | ಫ್ | ಬ್ | ಭ್ | ಮ್ | ೫ |

**ವರ್ಗೀಯ ವ್ಯಂಜನಗಳಲ್ಲಿ ಮೂರು ಬಗೆಗಳಿವೆ**

೧. ಅಲ್ಪಪ್ರಾಣ : ಕಡಿಮೆ ಉಸಿರಿನಿಂದ ಉಚ್ಚರಿಸುವ ವ್ಯಂಜನಗಳು.
೨. ಮಹಾಪ್ರಾಣ : ಹೆಚ್ಚು ಉಸಿರಿನಿಂದ ಉಚ್ಚರಿಸುವ ವ್ಯಂಜನಗಳು.
೩. ಅನುನಾಸಿಕ : ಮೂಗಿನ ಸಹಾಯದಿಂದ ಉಚ್ಚರಿಸುವ ವ್ಯಂಜನಗಳು.

**ಅವರ್ಗೀಯ ವ್ಯಂಜನಗಳು :**

| | | | | | | | | |
|---|---|---|---|---|---|---|---|---|
| ಯ್ | ರ್ | ಲ್ | ವ್ | ಶ್ | ಷ್ | ಸ್ | ಹ್ | ಳ್ |

# ೪. ಸಾಧಕರು




– ಅರವಿಂದ ಮುಳಗುಂದ
– ಶಮಸುದ್ದೀನ್ ಬಾ ಝಾರೆ

**ಪ್ರವೇಶ :**

ಪ್ರತಿಯೊಬ್ಬ ಮನುಷ್ಯನಲ್ಲೂ ಒಂದಲ್ಲಾ ಒಂದು ಪ್ರತಿಭೆ ಇರುತ್ತದೆ. ಆ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸಿದರೆ ವ್ಯಕ್ತಿತ್ವ ಅರಳುತ್ತದೆ. ಸಮಾಜಕ್ಕೂ ದೊಡ್ಡ ಕೊಡುಗೆಯಾಗುತ್ತದೆ. ಕ್ರೀಡೆ, ಸಂಗೀತ, ಸಾಹಿತ್ಯ, ನೃತ್ಯ, ಶಿಲ್ಪಕಲೆ, ಚಿತ್ರಕಲೆ, ಮೊದಲಾದ ಕ್ಷೇತ್ರಗಳಲ್ಲಿ ಅಸಾಧಾರಣ ಸಾಧನೆ ಮಾಡಿದ ಸಾಧಕರು ನಮಗೆ ಇಂದಿಗೂ ಸ್ಫೂರ್ತಿದಾಯಕರಾಗಿದ್ದಾರೆ.



## ೧. ಸ್ವರ ಸಾಮ್ರಾಟ



ಒಬ್ಬ ಹುಡುಗ ದಿನಾಲು ಶಾಲೆಗೆ ಹೋಗುತ್ತಿದ್ದನು. ಆದರೆ ಪ್ರತಿದಿನವೂ ಶಾಲೆಯಿಂದ ಮನೆಗೆ ತಡವಾಗಿ ಬರುತ್ತಿದ್ದನು. ಎಷ್ಟೇ ವಿಚಾರಿಸಿದರೂ ಕಾರಣ ಹೇಳುತ್ತಿರಲಿಲ್ಲ. ಒಮ್ಮೆ ಆ ಹುಡುಗನ ತಂದೆ ಪೇಟೆ ಬೀದಿಯಲ್ಲಿ ಹೋಗುತ್ತಿದ್ದರು. ಆಗ ಅಲ್ಲಿಯೇ ಇದ್ದ ಗ್ರಾಮಫೋನ್ ರಿಕಾರ್ಡ್ ಅಂಗಡಿಯ ಮಾಲೀಕರೊಬ್ಬರು ತಂದೆಯನ್ನು ಕರೆದರು. “ನಿಮ್ಮ ಮಗ ಭಾಳ ಚೆಂದ ಹಾಡತಾನ್ರಿ. ನೀವು ಕೇಳಿಲ್ಲೇನ್ರಿ? ಶಾಲೆ ಬಿಟ್ಟ ತಕ್ಷಣ ಇಲ್ಲಿಗೇ ಬಂದು ಕೂಡತಾನ. ನಾನು ಅವನಿಗೆ ಹಾಡುಗಳನ್ನು ಹಾಕಿ ಕೇಳಿಸ್ತೀನಿ. ಹಾಡುಗಳನ್ನು ಕೇಳಿ ಕೇಳಿ ಅದರ್‍ಹಾಂಗ ಅವನೂ ಹಾಡತಾನ್ರಿ” ಎಂದು ಹೇಳಿದರು. ಆಗ ತಂದೆಗೆ ಮಗ ಶಾಲೆಯಿಂದ ತಡವಾಗಿ ಬರುವ ಕಾರಣ, ಹಾಗೆಯೇ ಮಗನ ಅಭಿರುಚಿಯು ತಿಳಿಯಿತು. ಮಗನ ಆಸೆಗೆ ತಕ್ಕಂತೆ ಸಂಗೀತ ಪಾಠಕ್ಕೆ ಕಳುಹಿಸಿ ಸಂಗೀತ ಕಲಿಯಲು ನೆರವಾದರು.

ಹೀಗೆ ಚಿಕ್ಕಂದಿನಲ್ಲಿಯೇ ಸಂಗೀತದ ಬಗ್ಗೆ ಆಸಕ್ತಿ ಬೆಳೆಸಿಕೊಂಡು ದೊಡ್ಡವರಾದ ಮೇಲೆ ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿ ದಿಗ್ಗಜರೆನಿಸಿಕೊಂಡವರು ಯಾರು ಗೊತ್ತೇ? ಅವರೇ ‘ಭಾರತರತ್ನ’ ಪ್ರಶಸ್ತಿ ಪುರಸ್ಕೃತ ಪಂಡಿತ ಭೀಮಸೇನ ಜೋಶಿಯವರು.

ಭೀಮಸೇನರ ತಂದೆ ಗುರುರಾಜ, ತಾಯಿ ರಮಾಬಾಯಿ, ಗುರುಗಳು ಸವಾಯಿ ಗಂಧರ್ವರು. ಭೀಮಸೇನರು ೦೪-೦೨-೧೯೨೨ ರಂದು ಗದಗ ಜಿಲ್ಲೆಯ ರೋಣ ಎಂಬ ಊರಿನಲ್ಲಿ ಜನಿಸಿದರು.

ಭೀಮಸೇನರು ಶಾಂತ ಸ್ವಭಾವದವರು. ಅವರು ಪ್ರತಿ ಸಂಗೀತ ಕಚೇರಿಯನ್ನು ಪರೀಕ್ಷೆಯಾಗಿ ಸ್ವೀಕರಿಸುತ್ತಿದ್ದರು. ಸಂಗೀತದ ವಿವಿಧ ರಾಗಗಳಲ್ಲಿ ಕವಿಯ ಭಾವನೆಗಳನ್ನು ಮನಮುಟ್ಟುವಂತೆ ಹೇಳುವ ಕಲೆ ಅವರಿಗೆ ಸಿದ್ಧಿಯಾಗಿತ್ತು. ವೇದಿಕೆಯಲ್ಲಿ ಅವರು ಹಾಡಲು ಪ್ರಾರಂಭಿಸಿದರೆ ಕೇಳುಗರು ಮೈಮರೆಯುತ್ತಿದ್ದರು. ಇಂತಹ ಪ್ರತಿಭಾನ್ವಿತ ಪಂಡಿತ ಭೀಮಸೇನ ಜೋಶಿಯವರು ೨೪ನೇ ಜನವರಿ ೨೦೧೧ ರಲ್ಲಿ ನಮ್ಮನ್ನಗಲಿದರು. ಅವರ ಸಾಧನೆ ಸಂಗೀತ ಕ್ಷೇತ್ರದಲ್ಲಿ ಅಮರವಾಗಿ ಉಳಿದಿದೆ.

## ೨. ಜ್ಞಾನದ ಅರಸ

"ಬೆಳೆಯುವ ಸಿರಿ ಮೊಳಕೆಯಲ್ಲೇ ನೋಡು" ಎನ್ನುವ ಹಾಗೆ ಒಬ್ಬ ಶಿಕ್ಷಣ ತಜ್ಞರು ತಮ್ಮ ಬಾಲ್ಯದಲ್ಲಿ ಆಡಿದ ಆಟಗಳು ಎಲ್ಲ ಮಕ್ಕಳಿಗಿಂತ ಭಿನ್ನವಾಗಿವೆ. ಅವರು ಮನೆಯಲ್ಲಿನ ಸಾಮಾನು, ಪೆಟ್ಟಿಗೆಗಳನ್ನು ರೈಲುಗಾಡಿಗಳಂತೆ ಸಾಲಾಗಿ ಜೋಡಿಸಿ ತಮ್ಮ ತಂದೆಯ ಪಗಡಿಯನ್ನು ಧರಿಸಿಕೊಂಡು ತಮ್ಮ ಅಕ್ಕಂದಿರಿಗೆ "ನೀವು ಎಲ್ಲರೂ ಜೋರಾಗಿ ಹೇಳಿರಿ, ದಿಲ್ಲಿಯಿಂದ ಮೌಲಾನಾ ಬರುತ್ತಿದ್ದಾರೆ, ದೂರ ಸರಿಯಿರಿ, ದಾರಿಬಿಡಿ ಮತ್ತು ನೀವೆಲ್ಲರೂ ಜೈಕಾರ ಹಾಕಿ" ಎಂದು ಹೇಳುತ್ತ ನಂತರ ಆ ಬಾಲಕ ರಾಜಗಾಂಭೀರ್ಯದಿಂದ ಹೆಜ್ಜೆ ಹಾಕುತ್ತಾ ಎತ್ತರವಾದ ಸ್ಥಳದಲ್ಲಿ ನಿಂತು ಜೋರಾಗಿ ಭಾಷಣ ಮಾಡುತ್ತಿದ್ದರು. ಮನೆಯಲ್ಲಿ ಎಲ್ಲರೂ ಬಾಲಕನ ಭಾಷಣ ಕೇಳಿ ಚಪ್ಪಾಳೆ ತಟ್ಟುತ್ತಿದ್ದರು. ಚಿಕ್ಕಂದಿನಿಂದ ವಿದ್ಯಾ ಬುದ್ಧಿಯಲ್ಲೂ ಜಾಣನಾಗಿದ್ದ ಬಾಲಕನೇ ಮುಂದೆ ಸ್ವತಂತ್ರ ಭಾರತದ ಪ್ರಥಮ ಶಿಕ್ಷಣಮಂತ್ರಿಗಳಾದ ಮೌಲಾನಾ ಅಬುಲ್ ಕಲಾಮ್ ಆಜಾದರು.



ಮೌಲಾನಾರವರು ೧೧-೧೧-೧೮೮೮ರಂದು ಜನಿಸಿದರು. ತಂದೆ ಖೈರೂದ್ದೀನ್, ತಾಯಿ ಅಲಿಯಾಬೇಗಂ. ಅಬುಲ್ ಕಲಾಮ್‌ರವರು ತಮ್ಮ ಹನ್ನೆರಡನೇ ವಯಸ್ಸಿನಲ್ಲಿ ಅರಬ್ಬಿ, ಫಾರಸಿ ಮತ್ತು ಉರ್ದು ಭಾಷೆಗಳನ್ನು ಓದಿದ್ದರು. ಬಾಲ್ಯದಿಂದಲೇ ಸಾಹಿತ್ಯದ ಅಭಿರುಚಿ ಹೊಂದಿದ ಇವರು 'ಆಜಾದ್' ಕಾವ್ಯನಾಮದಿಂದ ಸಾಹಿತ್ಯಕೃಷಿ ಮಾಡಿರುವವರು.

ಮೌಲಾನಾ ಆಜಾದರು ಉತ್ತಮ ಪತ್ರಿಕೋದ್ಯಮಿಗಳಾಗಿದ್ದರು. ೧೨ನೇ ವಯಸ್ಸಿನಲ್ಲಿಯೇ ತಮ್ಮ ಸಂಪಾದಕತ್ವದಲ್ಲಿ 'ಅಲ್ ಮಿಸ್‌ಬಾಹ' ಎಂಬ ಪತ್ರಿಕೆಯನ್ನು ಹೊರತಂದು ಎಲ್ಲರನ್ನೂ ಬೆರಗುಗೊಳಿಸಿದರು. ಅನಂತರ ಅವರು 'ಅಲ್ ಹಿಲಾಲ್' ಮತ್ತು 'ಅಲ್ ಬಲಾಗ್' ಎಂಬ ಪತ್ರಿಕೆಗಳ ಮೂಲಕ ಭಾರತೀಯರನ್ನು ಜಾಗೃತಗೊಳಿಸಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಸಂಗ್ರಾಮದ ಕಿಡಿ ಹೊತ್ತಿಸಿದರು.

ಸ್ವಾತಂತ್ರ್ಯ ಹೋರಾಟದಲ್ಲಿ ಮಹಾತ್ಮ ಗಾಂಧೀಜಿ ಮತ್ತು ಪಂಡಿತ ಜವಾಹರಲಾಲ್ ನೆಹರೂರೊಂದಿಗೆ ಭಾಗವಹಿಸಿ ಕ್ರಿ.ಶ. ೧೯೨೨ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಘಟನೆಯ ಅಧ್ಯಕ್ಷಸ್ಥಾನ ಅಲಂಕರಿಸಿದರು. ಗಾಂಧೀಜಿಯವರು ಆಜಾದರನ್ನು 'ಜ್ಞಾನದ ಅರಸ' ಎಂದು ಕರೆದರು.

ಆಜಾದರು ಕ್ರಿ.ಶ. ೧೯೫೮ ಫೆಬ್ರವರಿ ೨೨ರಂದು ನಿಧನರಾದರು. ಭಾರತ ಸರ್ಕಾರವು ಅವರಿಗೆ ಮರಣೋತ್ತರ 'ಭಾರತರತ್ನ' ಪ್ರಶಸ್ತಿ ನೀಡಿ ಗೌರವಿಸಿದೆ. ಆಜಾದರು ಶಿಕ್ಷಣ ಕ್ಷೇತ್ರದಲ್ಲಿ ಮಾಡಿದ ಸಾಧನೆಯನ್ನು ಗಮನಿಸಿ ಭಾರತ ಸರ್ಕಾರವು ಅವರು ಹುಟ್ಟಿದ ದಿನವಾದ ನವೆಂಬರ್ ೧೧ರಂದು ಪ್ರತಿವರ್ಷ 'ರಾಷ್ಟ್ರೀಯ ಶಿಕ್ಷಣ ದಿನ'ವನ್ನಾಗಿ ಘೋಷಿಸಿದೆ. ಬನ್ನಿ, ನಾವೂ ಈ ಮಹಾನ್ ವ್ಯಕ್ತಿಗೆ ಗೌರವ ಸಲ್ಲಿಸೋಣ.

**"ಆಸಕ್ತಿ, ನಿರ್ದಿಷ್ಟ ಗುರಿ, ಛಲ ಹಾಗೂ ನಿರಂತರ ಪ್ರಾಮಾಣಿಕ ಪ್ರಯತ್ನಗಳು ಮನುಷ್ಯನನ್ನು ಸಾಧಕನನ್ನಾಗಿಸುತ್ತವೆ."**



**ಕೃತಿಕಾರರ ಪರಿಚಯ:**

೧. ಅರವಿಂದ ಮುಳಗುಂದ ಅವರು ಭೀಮಸೇನ ಜೋಶಿಯವರಿಗೆ ಸಂಬಂಧಿಸಿದ ಘಟನೆ ಹಾಗೂ ಚಿತ್ರಗಳನ್ನು ವಿವಿಧೆಡೆಯಿಂದ ಸಂಪಾದಿಸಿ 'ಭಾರತರತ್ನ ಭೀಮಸೇನ ಜೋಶಿ' ಎಂಬ ಪುಸ್ತಕವನ್ನು ಅಂಕಿತ ಪ್ರಕಾಶನದಿಂದ ಹೊರತಂದಿದ್ದಾರೆ. ಆ ಪುಸ್ತಕದ ಆಧಾರದಿಂದ 'ಸ್ವರಸಾಮ್ರಾಟ' ಗದ್ಯಪಾಠವನ್ನು ಸಿದ್ಧಪಡಿಸಿದೆ.





೨. ಉತ್ತಮ ಶಿಕ್ಷಕ ಪ್ರಶಸ್ತಿ ವಿಜೇತರಾದ ಶಮಸುದ್ದಿನ್ ಬಾ ಝೂರೆ ಅವರು ಬಾಗಲಕೋಟೆ ಜಿಲ್ಲೆಯ ಬನಹಟ್ಟಿಯಲ್ಲಿ ೦೧.೦೪.೧೯೬೫ರಲ್ಲಿ ಜನಿಸಿದರು. ಇವರ ಕಾವ್ಯನಾಮ ಶಮ್ಸು ನಿಯಾಜಿ. ಉರ್ದು, ಕನ್ನಡ ಮತ್ತು ಹಿಂದಿಯಲ್ಲಿ ಭಾವೈಕ್ಯತೆ ಮತ್ತು ದೇಶಪ್ರೇಮವನ್ನು ಸಾರುವ ಹಲವಾರು ಕವನಗಳು ಮತ್ತು ಲೇಖನಗಳನ್ನು ಬರೆದಿದ್ದಾರೆ. ದಾಸ ಸಾಹಿತ್ಯ ಹಾಗೂ ವಚನ ಸಾಹಿತ್ಯವನ್ನು ಉರ್ದುವಿಗೆ ಅನುವಾದ ಮಾಡಿದ್ದಾರೆ. ಸೂಫಿ ಸಂತರ ವಿಚಾರಗಳನ್ನು ಕನ್ನಡದಲ್ಲಿ ಬರೆದಿದ್ದಾರೆ.

| | | |
|---|---|---|
| **ಕ್ಷೇತ್ರ** | : | ಓದುವುದು |
| **ಸಾಮರ್ಥ್ಯ** | : | ಮುದ್ರಿತ ಅಕ್ಷರ, ಪದ ಮತ್ತು ಸರಳ ವಾಕ್ಯಗಳನ್ನು ಓದುವುದು. |

**ಪದಗಳ ಅರ್ಥ :**

| | | | |
|---|---|---|---|
| ಅಗಲು | – ಬಿಟ್ಟುಹೋಗು; | ಪಗಡಿ | – ರುಮಾಲು, ಪೇಟ; |
| ಅಭಿರುಚಿ | – ಇಷ್ಟ, ಆಸೆ; | ಪುರಸ್ಕೃತ | – ಗೌರವಿಸಲ್ಪಟ್ಟ; |
| ಅಲಂಕರಿಸು | – ಶೃಂಗರಿಸು; | ಪೇಟೆಬೀದಿ | – ಅಂಗಡಿಗಳನ್ನು ಹೊಂದಿದ ರಸ್ತೆ; |
| ಆಸಕ್ತಿ | – ವಿಷಯದಲ್ಲಿನ ಮನಸ್ಸು, ಪ್ರೀತಿ; | ಪ್ರಶಸ್ತಿ | – ಪುರಸ್ಕಾರ, ಪಾರಿತೋಷಕ; |
| | | ಬೆರಗು | – ಆಶ್ಚರ್ಯ; |
| ಕಚೇರಿ | – ಕಾರ್ಯಾಲಯ; | ಮಾಲೀಕ | – ಯಜಮಾನ, ಒಡೆಯ; |
| ತಜ್ಞರು | – ಅರಿತವರು, ತಿಳಿದವರು; | ವಿಚಾರಿಸು | – ವಿವರಕೇಳು, ತಿಳಿದುಕೊ; |
| ದಿಗ್ಗಜ | – ಪ್ರಸಿದ್ಧ, ಹೆಸರಾಂತ; | ವಿಭಿನ್ನ | – ಬೇರೆಗೊಂಡ, ಬೇರೆ ರೀತಿಯ; |
| ನಿಧನ | – ಸಾವು, ಮರಣ; | | |
| ನೆರವು | – ಬೆಂಬಲ, ಸಹಾಯ; | ಸ್ವೀಕರಿಸು | – ಪಡೆದುಕೊಳ್ಳು. |

**ಟಿಪ್ಪಣಿ :**

ಗ್ರಾಮಫೋನ್ : ಹಿಂದಿನ ಕಾಲದಲ್ಲಿ ಹಾಡುಗಳನ್ನು ಕೇಳಲು ಉಪಯೋಗಿಸುತ್ತಿದ್ದ ಒಂದು ಸಾಧನ.

ಭಾರತರತ್ನ : ಬೇರೆ ಬೇರೆ ಕ್ಷೇತ್ರದಲ್ಲಿ ವಿಶೇಷ ಸಾಧನೆಗೈದ ಸಾಧಕರಿಗೆ ಭಾರತ ಸರಕಾರ ಕೊಡುವ ಸರ್ವಶ್ರೇಷ್ಠ ಪ್ರಶಸ್ತಿ.

ರಾಜಗಾಂಭೀರ್ಯ : ಒಬ್ಬ ಮನುಷ್ಯನ ಗಂಭೀರತೆಗೆ ಇರುವ ಘನತೆ.

ಮರಣೋತ್ತರ ಪ್ರಶಸ್ತಿ : ವಿಶೇಷ ಸಾಧನೆ ಮಾಡಿದವರಿಗೆ ಮರಣದ ನಂತರ ನೀಡಲಾಗುವ ಪ್ರಶಸ್ತಿ.



## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಪಂಡಿತ ಭೀಮಸೇನ ಜೋಶಿಯವರು ಯಾವ ಕ್ಷೇತ್ರದಲ್ಲಿ ದಿಗ್ಗಜರೆನಿಸಿಕೊಂಡರು?

______________________________________________

೨. ಭೀಮಸೇನರ ತಂದೆ, ತಾಯಿಯ ಹೆಸರೇನು?

______________________________________________

೩. ಭೀಮಸೇನರು ಯಾವ ಊರಿನಲ್ಲಿ ಜನಿಸಿದರು?

________________________________________

೪. ಸ್ವತಂತ್ರ ಭಾರತದ ಪ್ರಥಮ ಶಿಕ್ಷಣ ಮಂತ್ರಿಗಳು ಯಾರು?

________________________________________

೫. ಮೌಲಾನಾರವರ ಕಾವ್ಯನಾಮ ಯಾವುದು?

________________________________________

೬. ಗಾಂಧೀಜಿಯವರು ಮೌಲಾನಾ ಆಜಾದ್‌ರನ್ನು ಏನೆಂದು ಕರೆದರು?

________________________________________

## ಆ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಭೀಮಸೇನ ಜೋಶಿಯವರು ಸಂಗೀತ ಕಚೇರಿಯನ್ನು ಹೇಗೆ ನಡೆಸುತ್ತಿದ್ದರು?

________________________________________

________________________________________

________________________________________

೨. ಮೌಲಾನಾರವರ ಬಾಲ್ಯದ ಆಟಗಳು ಹೇಗಿದ್ದವು?

________________________________________

________________________________________

________________________________________

೩. ಮೌಲಾನಾ ಮತ್ತು ಭೀಮಸೇನರಿಗೆ ದೊರೆತ ಪ್ರಶಸ್ತಿ ಯಾವುದು?

________________________________________

________________________________________

________________________________________

೪. ಭಾರತ ಸರಕಾರ ಆಜಾದರ ಹುಟ್ಟಿದ ದಿನವನ್ನು ಯಾವ ದಿನವನ್ನಾಗಿ ಆಚರಿಸುತ್ತಿದೆ? ಏಕೆ?

___________________________________________

___________________________________________

___________________________________________

೫. ಮಕ್ಕಳೇ, ಮುಂದೆ ನೀವೇನಾಗಬೇಕೆಂದು ಬಯಸುವಿರಿ?

___________________________________________

___________________________________________

___________________________________________

೬. ಭೀಮಸೇನ ಜೋಶಿ ಮತ್ತು ಮೌಲಾನಾ ಆಜಾದ್‌ರವರಲ್ಲಿ ನೀವು ಮೆಚ್ಚುವ ಗುಣಗಳಾವುವು?

___________________________________________

___________________________________________

___________________________________________



## ಭಾಷಾಭ್ಯಾಸ

### ಅ) ಕೊಟ್ಟಿರುವ ಪದ ಬಳಸಿ ಸ್ವಂತ ವಾಕ್ಯ ಬರೆಯಿರಿ.

೧. ಆಸಕ್ತಿ : ______________________

೨. ಭಾಷಣ : ______________________

೩. ಪುರಸ್ಕಾರ : ______________________

೪. ಗೌರವ : ______________________

### ಆ) ಗುಂಪಿಗೆ ಸೇರದ ಪದ ಗುರುತಿಸಿ ಬರೆಯಿರಿ.

೧. ಪಿಟೀಲು, ತಂಬೂರಿ, ತಬಲ, ಕಾಗದ = __________

೨. ಶಿಕ್ಷಣ, ಪುಸ್ತಕ, ರೈತ, ಶಾಲೆ = __________

೩. ಬೆರಗು, ಆಶ್ಚರ್ಯ, ಅಚ್ಚರಿ, ಬೆಳಕು = __________

೪. ಗೌರವ, ಮಾನ್ಯತೆ, ಆದರ, ತಿರಸ್ಕಾರ = __________

**ಇ) ಕೊಟ್ಟಿರುವ ಪದ ಗಮನಿಸಿ, ವಿರುದ್ಧಾರ್ಥಕ ಪದ ಬರೆಯಿರಿ.**

೧. ಸಹಾಯ × ____________

೨. ಶಾಂತಿ × ____________

೩. ಜ್ಞಾನ × ____________

೪. ಆಸಕ್ತಿ × ____________

೫. ಪುರಸ್ಕಾರ × ____________

## ಭಾಷಾ ಚಟುವಟಿಕೆ

### ಭಾಗ 'ಅ'

**ಅ) ಕೆಳಗಿನ ಪದಗಳ ಬಿಟ್ಟು ಹೋದ ಅಕ್ಷರವನ್ನು ಚೌಕದಲ್ಲಿ ಬರೆಯಿರಿ. ಅವುಗಳಿಂದ ರಚಿಸಬಹುದಾದ ಪದಗಳನ್ನು ಕೆಳಗೆ ಬರೆಯಿರಿ :**










____________ ____________ ____________

____________ ____________ ____________

**ಆ) ಪದ ರಚಿಸುವ ಆಟ :**

ಒಬ್ಬ ಮಹಾನ್ ವ್ಯಕ್ತಿಯ ಅಥವಾ ತಮ್ಮ ಹೆಸರನ್ನೇ ಬರೆದು ಹೆಸರುಗಳಲ್ಲಿರುವ ಅಕ್ಷರಗಳನ್ನು ಜೋಡಿಸಿ ಪದಗಳನ್ನು ರಚಿಸುವುದು.

**ಆಟದ ವಿಧಾನ** : ಎರಡು ಗುಂಪಿಗೆ ಎರಡು ಹೆಸರುಗಳನ್ನು ಬರೆದ ಕಾರ್ಡ್‌ಗಳನ್ನು ಕೊಡುವುದು. ಹೆಚ್ಚು ಪದ ರಚನೆ ಮಾಡಿದ ತಂಡವು ಜಯಗಳಿಸುವುದು ಹೆಸರು ದೊಡ್ಡದಾಗಿರಬೇಕು. ಮಾದರಿಯಂತೆ ಬರೆಯಿರಿ.

ಮಾದರಿ :

| ಪಂಡಿತ ಭೀಮಸೇನ ಜೋಶಿ |
|---|
| ಪಂಡಿತ, ಪಂತ, ಮನ, ಸೇನ, ಮತ, ಭೀಮ, ಮಶಿ, ಜೋಡಿ, ಮಡಿ, ತಮ, ತನ, ತಡಿ |

೧. ವಿನಾಯಕ ಕೃಷ್ಣ ಗೋಕಾಕ

೨. ಶಿವರಾಮ ಕಾರಂತ

## ಇ) ಪದರಚನೆ :

**ಶಬ್ದದ ಆರಂಭದ ಅಕ್ಷರ ಬೇರೆಯಾಗಿದ್ದು ಉಳಿದ ಎರಡು ಅಕ್ಷರಗಳು ಒಂದೇ ರೀತಿಯಾಗಿರುತ್ತವೆ. ಇಲ್ಲಿ ಕೊಟ್ಟಿರುವ 'ಸುಳಿವು' ಸಹಾಯ ಪಡೆದುಕೊಂಡು ಪದಗಳನ್ನು ರಚಿಸಿರಿ :**

| ಅ.ನಂ | | | | ಸುಳಿವು | ಉತ್ತರಗಳು |
|---|---|---|---|---|---|
| ಮಾದರಿ | ಕೊ | ರ | ಳು | ಕುತ್ತಿಗೆ | ಕೊರಳು |
| ೧ | | ರ | ಳು | ಉಸುಕು | |
| ೨ | | ರ | ಳು | ಹೋಗು | |
| ೩ | | ರ | ಳು | ಪ್ರತಿಬಿಂಬ | |
| ೪ | | ರ | ಳು | ಬಾಣ | |
| ೫ | | ರ | ಳು | ಜಡೆ | |
| ೬ | | ರ | ಳು | ರುಬ್ಬುವ ಕಲ್ಲು | |
| ೭ | | ರ | ಳು | ಸಿಟ್ಟಿಗೇಳು | |
| ೮ | | ರ | ಳು | ಯಾತನೆ, ನೋವು | |

## ಭಾಗ 'ಆ'

೧. ದಿನಪತ್ರಿಕೆಗಳಲ್ಲಿ ಬರುವ ಸಾಧಕರ ಜೀವನ ಚರಿತ್ರೆಗಳನ್ನು ಸಂಗ್ರಹಿಸಿರಿ. ಚಿತ್ರಸಂಪುಟ(ಆಲ್ಬಮ್) ತಯಾರಿಸಿರಿ.

೨. ನಿಮ್ಮ ಬಾಲ್ಯದ ವಿಶೇಷ ಘಟನೆಯೊಂದನ್ನು ಬರೆಯಿರಿ.

೩. ಪಂಚತಂತ್ರ, ಅಕ್ಬರ್–ಬೀರಬಲ್‌ನ ಕಥೆ, ತೆನಾಲಿ ರಾಮಕೃಷ್ಣನ ಕಥೆ, ಈಸೋಪನ ಕಥೆ, ಅನುಪಮಾ ನಿರಂಜನ ಅವರ 'ದಿನಕ್ಕೊಂದು ಕತೆ' ಮಾಲಿಕೆಯ ಕಥೆಗಳನ್ನು ಓದಿ ಕಥೆ ಹೇಳಿರಿ.

೪. ಸಾರ್ವಜನಿಕ ಸ್ಥಳಗಳಲ್ಲಿ ನೀವು ಗಮನಿಸಿದ ಸೂಚನೆಗಳನ್ನು ಪಟ್ಟಿಮಾಡಿರಿ.

೫. ನಿಮ್ಮ ಸುತ್ತಮುತ್ತಲಲ್ಲಿ ಪ್ರಸಿದ್ಧಿ ಪಡೆದ ವ್ಯಕ್ತಿಗಳ ಹೆಸರು ತಿಳಿಸಿರಿ ಮತ್ತು ಅವರು ಯಾವ ಕ್ಷೇತ್ರದಲ್ಲಿ ಪ್ರಸಿದ್ಧರೆಂಬುದನ್ನು ಪಟ್ಟಿಮಾಡಿರಿ.

೬. ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಸಾಧಕರ ಬಗ್ಗೆ ವಿವರಿಸಿರಿ.

೭. ನೀವು ಶಾಲೆಯ ಯಾವ ಯಾವ ಸ್ಪರ್ಧೆಗಳಲ್ಲಿ ಭಾಗವಹಿಸಲು ಇಷ್ಟಪಡುವಿರಿ?

# ವ್ಯಾಕರಣ

## ಭಾಗ 'ಅ'



♦ **ಗುಣಿತಾಕ್ಷರಗಳು :** ವ್ಯಂಜನಕ್ಕೆ ಒಂದು ಸ್ವರ ಸೇರಿ ಆಗುವ ಅಕ್ಷರಗಳು.

### ಗುಣಿತಾಕ್ಷರಗಳು

ವ್ಯಂಜನಗಳನ್ನು ಉಚ್ಚರಿಸಲು ಸ್ವರದ ಸಹಾಯ ಬೇಕಾಗುತ್ತದೆ. ವ್ಯಂಜನಗಳಿಗೆ ಸ್ವರಗಳು ಸೇರಿ ಆಗುವ ಅಕ್ಷರಗಳೇ ಗುಣಿತಾಕ್ಷರಗಳು. ವ್ಯಂಜನದ ಮೊದಲ ಅಕ್ಷರ 'ಕ್'ಗೆ ಸ್ವರಗಳನ್ನು ಸೇರಿಸಿ ಗುಣಿತಾಕ್ಷರದ ಅಭ್ಯಾಸವನ್ನು ಪ್ರಾರಂಭಿಸುವುದರಿಂದ ಈ ಕ್ರಮಕ್ಕೆ 'ಕಾಗುಣಿತ' ಎಂದು ಹೇಳುವುದು ರೂಢಿಗೆ ಬಂದಿದೆ. ವ್ಯಂಜನಗಳಿಗೆ ಸ್ವರವನ್ನು ಸೇರಿಸಿ ಬರೆಯುವಾಗ ಸ್ವರ ಸಂಜ್ಞೆಗಳನ್ನು(ಚಿಹ್ನೆಗಳನ್ನು) ಸೇರಿಸಿ ಬರೆಯುತ್ತೇವೆ.

| ವ್ಯಂಜನ | ಸ್ವರ | ಸ್ವರ ಸಂಜ್ಞೆ (ಚಿಹ್ನೆ) | ಸ್ವರ ಸಂಜ್ಞೆ (ಚಿಹ್ನೆ) ಹೆಸರು | ಗುಣಿತಾಕ್ಷರ |
|---|---|---|---|---|
| ಕ್ | ಅ | ـ | ತಲೆಕಟ್ಟು | ಕ |
| ಕ್ | ಆ | ಾ | ಇಳಿ/ದೀರ್ಘ | ಕಾ |
| ಕ್ | ಇ | ಿ | ಗುಡಿಸು/ಗುಣಿಸು | ಕಿ |
| ಕ್ | ಈ | ೀ | ಗುಡಿಸಿನ/ಗುಣಿಸಿನ ದೀರ್ಘ | ಕೀ |
| ಕ್ | ಉ | ು ು | ಕೊಂಬು | ಕು |
| ಕ್ | ಊ | ೂ ೂ | ಕೊಂಬಿನ ಇಳಿ/ದೀರ್ಘ | ಕೂ |

| ವ್ಯಂಜನ | ಸ್ವರ | ಸ್ವರ ಸಂಜ್ಞೆ (ಚಿಹ್ನೆ) | ಸ್ವರ ಸಂಜ್ಞೆ (ಚಿಹ್ನೆ) ಹೆಸರು | ಗುಣಿತಾಕ್ಷರ |
|---|---|---|---|---|
| ಕ್ | ಋ | ೃ | ವಟ್ಟಸುಳಿ | ಕೃ |
| ಕ್ | ಎ | ೆ | ಎತ್ವ | ಕೆ |
| ಕ್ | ಏ | ೇ | ಎತ್ವನ ದೀರ್ಘ/ಏತ್ವ | ಕೇ |
| ಕ್ | ಐ | ೈ | ಐತ್ವ | ಕೈ |
| ಕ್ | ಒ | ೊ | ಒತ್ವ | ಕೊ |
| ಕ್ | ಓ | ೋ | ಒತ್ವನ ದೀರ್ಘ/ಓತ್ವ | ಕೋ |
| ಕ್ | ಔ | ೌ | ಔತ್ವ | ಕೌ |
| ಕ್ | ಅಂ | ಂ | ಅ ಒಂದು ಸೊನ್ನೆ | ಕಂ |
| ಕ್ | ಅಃ | ಃ | ಅ ಎರಡು ಸೊನ್ನೆ | ಕಃ |

**ಇಲ್ಲಿನ ಅಕ್ಷರಗಳನ್ನು ಗಮನಿಸಿರಿ.**

| | | | | |
|---|---|---|---|---|
| ಕ್+ಅ=ಕ | ಕ್+ಆ=ಕಾ | ಕ್+ಇ=ಕಿ | ಕ್+ಈ=ಕೀ | ಕ್+ಉ=ಕು |
| ಕ್+ಊ=ಕೂ | ಕ್+ಋ=ಕೃ | ಕ್+ಎ=ಕೆ | ಕ್+ಏ=ಕೇ | ಕ್+ಐ=ಕೈ |
| ಕ್+ಒ=ಕೊ | ಕ್+ಓ=ಕೋ | ಕ್+ಔ=ಕೌ | ಕ್+ಂ=ಕಂ | ಕ್+ಃ=ಕಃ |



## ಭಾಗ 'ಆ'

**ಅ) ಮಾದರಿಯಂತೆ ಕೆಳಗಿನ ಅಕ್ಷರಗಳನ್ನು ಬಿಡಿಸಿ ಬರೆಯಿರಿ.**

**ಮಾದರಿ :** ವಿಚಾರಿಸು = ವ್ + ಇ = ವಿ  ಚ್ + ಆ = ಚಾ
ರ್ + ಇ = ರಿ  ಸ್ + ಉ = ಸು

ಮಾಲೀಕ = ..............................................................

**ಆ) ಮಾದರಿಯಂತೆ ಗುಣಿತಾಕ್ಷರಗಳನ್ನು ಕೂಡಿಸಿ ಬರೆಯಿರಿ.**

**ಮಾದರಿ :** ಆ + ಸ್ + ಅ + ಕ್ + ತ್ + ಇ = ಆಸಕ್ತಿ

ದ್ + ಇ + ಗ್ + ಗ್ + ಅ + ಜ್ + ಅ = ____________

# ೫. ಮಲೆನಾಡ ಸೆರಗು




– ದ. ರಾ. ಬೇಂದ್ರೆ

**ಪ್ರವೇಶ :**

ಒಂದು ಕಡೆ ಮಲೆನಾಡು, ಇನ್ನೊಂದು ಕಡೆ ಬಯಲು ಸೀಮೆಯಿಂದ ಕೂಡಿರುವ ಧಾರವಾಡವನ್ನು 'ಮಲೆನಾಡಿನ ಸೆರಗು' ಎಂದು ಕರೆಯುತ್ತಾರೆ. ಈ ಪ್ರದೇಶದ ಸೊಬಗನ್ನು ಕವಿ ಬೇಂದ್ರೆಯವರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ವರ್ಣಿಸಿದ್ದಾರೆ.





ಏನು ಅಂದವೋ! ಅಹಹ! ಎನಿತು ಚೆಂದವೋ॥

ಬಟ್ಟಬಯಲು ಅತ್ತ ಇತ್ತ
ಹಸಿರು ಹುಲ್ಲು ಮೊತ್ತ ಮೊತ್ತ
ಪಚ್ಚೆಪಯಿರು ಸುತ್ತಮುತ್ತ

ಏನು ಅಂದವೋ! ಅಹಹ! ಎನಿತು ಚೆಂದವೋ॥

ಸೊಬಗುಗಾರ ಸಾಣಮಾಸ
ಬಿಗಿಯೆ ತನ್ನ ಬಾಹುಪಾಶ
ಮೊದ್ದುಮಾಗಿ ತೋರ್ಪ ಹಾಸ

ಏನು ಅಂದವೋ! ಅಹಹ! ಎನಿತು ಚೆಂದವೋ!
ಮಗಿಯ ಜಡಿಯು ತಲೆಯ ಮೇಲೆ
ಮೊರಡಿ ಸುತ್ತ ಮನದ ಮಾಲೆ
ತಪಿಸುತಿಹಳೊ–ಗಿರಿಜೆ–ಬಾಲೆ

ಏನು ಅಂದವೋ! ಅಹಹ! ಎನಿತು ಚೆಂದವೋ!
ಮಾವು ಮಲ್ಲಿಗೆಗಳ ಬೀಡು
ಇಲ್ಲಿ ಹಾಡದಿದ್ದ ಹಾಡು–
ಇದುವೆ ಮೀಸಲಿಟ್ಟ ನಾಡು!

ಏನು ಅಂದವೋ! ಅಹಹ! ಎನಿತು ಚೆಂದವೋ!
ಬರದು ಇಲ್ಲಿ ಬಯಲ ಭ್ರಾಂತಿ
ಮಾಸದಿಲ್ಲಿ ಮುಖದ ಕಾಂತಿ
ಪಡೆದಳಿಲ್ಲಿ ಸುಖವ ಶಾಂತಿ

ಏನು ಅಂದವೋ! ಅಹಹ! ಎನಿತು ಚೆಂದವೋ!
ಅಲ್ಲ ಬರಿದು ಹೊರಗು–ಮೆರಗು
ಅಂಚ ತುಂಬ ಕುಸುರ ಬೆರಗು
ತಾಯೆ ನಿನ್ನ ಮೇಲುಸೆರಗು
ಏನು ಅಂದವೋ! ಅಹಹ! ಎನಿತು ಚೆಂದವೋ!

**ಕೃತಿಕಾರರ ಪರಿಚಯ:**



**ಅಂಬಿಕಾತನಯದತ್ತ** ಎನ್ನುವುದು ಡಾ. ದ. ರಾ. ಬೇಂದ್ರೆಯವರ ಕಾವ್ಯನಾಮ. ಇವರ ಪೂರ್ಣ ಹೆಸರು ದತ್ತಾತ್ರೇಯ ರಾಮಚಂದ್ರ ಬೇಂದ್ರೆ. ೧೮೯೬ ರಲ್ಲಿ ಜನಿಸಿದ ಇವರು ಧಾರವಾಡದವರು. ಇವರ ಪ್ರಮುಖ ಕವನ ಸಂಕಲನಗಳು 'ಗರಿ', 'ಗಂಗಾವತರಣ', 'ಸಖೀಗೀತ', 'ಉಯ್ಯಾಲೆ' ಇತ್ಯಾದಿ. 'ನಾಕು ತಂತಿ' ಕವನ ಸಂಕಲನಕ್ಕೆ ಜ್ಞಾನಪೀಠ ಪ್ರಶಸ್ತಿ ದೊರೆತಿದೆ. ಮಲೆನಾಡ ಸೆರಗು ಕವನವನ್ನು **'ಅರಳು ಮರಳು'** ಎಂಬ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ. **'ಅರಳು ಮರಳು'** ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. ಇವರು ೨೬.೧೦.೧೯೮೧ ರಂದು ನಿಧನರಾದರು.

| | | |
|---|---|---|
| **ಕ್ಷೇತ್ರ** | : | ಮಾತನಾಡುವುದು. |
| **ಸಾಮರ್ಥ್ಯ** | : | ಸರಳ ಪ್ರಾಸ ಗೀತೆ, ಪದ್ಯ ಹಾಗೂ ಹಾಡುಗಳನ್ನು ಹಾವ ಭಾವ ಅಭಿನಯದ ಮೂಲಕ ಸಾಮೂಹಿಕ ಹಾಗೂ ವೈಯಕ್ತಿಕವಾಗಿ ಹಾಡುವುದು. |



**ಪದಗಳ ಅರ್ಥ**

ಅಂಚ–ಅಂಚು;

ಕುಸುರ–ಕುಸುರಿ, ಸೂಕ್ಷ್ಮವಾದ ಮತ್ತು ನಾಜೂಕಾದ ಕೆಲಸ;

ತಪಿಸು–ತಪಸ್ಸು ಮಾಡು, ಬಯಸು;

ಪಚ್ಚೆ–ಹಸಿರು;

ಪಯಿರು–ಬೆಳೆ, ಫಸಲು, ಪೈರು;

ಬಟ್ಟಬಯಲು–ಬರಿದಾದ ಮೈದಾನ;

ಬರದು–ಬರುವುದಿಲ್ಲ;

ಬಾಹು–ತೋಳು, ಭುಜ;

ಬಾಹುಪಾಶ–ತೋಳಿನ ಬಂಧನ;

ಬೆರಗು–ಸೋಜಿಗ, ವಿಸ್ಮಯ, ಆಶ್ಚರ್ಯ;

ಮಗಿ–ಮಖೆ (ಮಳೆ ನಕ್ಷತ್ರ), ಮೊಗ್ಗು;

ಮೆರಗು–ಹೊಳಪು, ಕಾಂತಿ;

ಮೊರಡಿ–ದಿಣ್ಣೆ, ಗುಡ್ಡ, ಕಲ್ಲಿರಾಶಿ;

ಸಾಣಮಾಸ–ಶ್ರಾವಣಮಾಸ;

ಹಾಸ–ನಗು, ಉಲ್ಲಾಸ, ನಲಿವು.

## ಅಭ್ಯಾಸ

ಅ) ಕೆಳಗಿನ ಪ್ರಶ್ನೆಯೊಂದು ಪ್ರಶ್ನೆಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. 'ಮಲೆನಾಡ ಸೆರಗು' ಕವನದಲ್ಲಿ ವರ್ಣಿಸಿರುವ ಪ್ರದೇಶ ಯಾವುದು?

________________________________________________

೨. ಬೇಂದ್ರೆಯವರು ಮಲೆನಾಡ ಸೆರಗಿನ ಅತ್ತ ಇತ್ತ, ಸುತ್ತಮುತ್ತ ಏನನ್ನು ಕಾಣಬಹುದು ಎಂದಿದ್ದಾರೆ?

______________________________

೩. ಸೊಗಸುಗಾರ ಎಂದು ಬೇಂದ್ರೆಯವರು ಯಾರನ್ನು ಕರೆದಿದ್ದಾರೆ?

______________________________

೪. ಬೇಂದ್ರೆಯವರು ಮಲೆನಾಡ ಸೆರಗು ಯಾವುದಕ್ಕೆ ಮೀಸಲಿಟ್ಟ ನಾಡಾಗಿದೆ ಎಂದಿದ್ದಾರೆ?

______________________________

೫. ಮಲೆನಾಡ ಸೆರಗು ಯಾವುದರ ಬೀಡಾಗಿದೆ?

______________________________

ಆ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಎರಡು ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೧. ಧಾರವಾಡದ ಗುಡ್ಡ ಬೇಂದ್ರೆಯವರಿಗೆ ಹೇಗೆ ಕಂಡಿದೆ?

______________________________

______________________________

______________________________

೨. ಮಲೆನಾಡ ಸೆರಗಿನ ವೈಶಿಷ್ಟ್ಯಗಳೇನು?

______________________________

______________________________

______________________________

೩. ಮಲೆನಾಡ ಸೆರಗಿನ ಪ್ರಕೃತಿ ಸೌಂದರ್ಯವನ್ನು ಬೇಂದ್ರೆಯವರು ಹೇಗೆ ವರ್ಣಿಸಿದ್ದಾರೆ?

______________________________________________________

______________________________________________________

______________________________________________________

ಇ) ಕೆಳಗಿನ ಪದ್ಯಭಾಗವನ್ನು ಪೂರ್ಣಗೊಳಿಸಿರಿ.

೧. ಏನು ಅಂದವೋ! ಅಹಹ! ಎನಿತು ಚೆಂದವೋ!

ಬರುದು -------------

--------- ಮುಖದ ----

------ಸುಖವ ------

೨. ಅಲ್ಲ ---------ಮೆರಗು

------------ ಬೆರಗು

---- ನಿನ್ನ -------

ಏನು ------- ಅಹಹ------ ಚೆಂದವೋ!



## ಭಾಷಾಭ್ಯಾಸ

ಅ) ಮಾದರಿಯಲ್ಲಿ ಕೊಟ್ಟಿರುವಂತೆ ಮಲೆನಾಡ ಸೆರಗು ಪದ್ಯದ ಪ್ರಾಸ ಪದಗಳನ್ನು ಬರೆಯಿರಿ.

**ಮಾದರಿ** : ಬೆರಗು–ಮೆರಗು

ಕಾಂತಿ –

ಅತ್ತ ಇತ್ತ –

ಬಾಲೆ –

ನಾಡು –

ಆ) ಕೆಳಗೆ ಕೊಟ್ಟಿರುವ ಪದಗಳ ಅರ್ಥ ಬರೆಯಿರಿ.

ಮೊರಡಿ –

ಹಾಸ –

ಕುಸುರಿ –

ಮೆರಗು –

ಪಚ್ಚೆ –

ಇ) ಕೆಳಗಿನ ಚೌಕದಲ್ಲಿ ಕೊಟ್ಟಿರುವ ಅಕ್ಷರಗಳನ್ನು ಬಳಸಿ ಮಾದರಿಯಂತೆ ಅರ್ಥಪೂರ್ಣ ಪದಗಳನ್ನು ರಚಿಸಿರಿ.

**ಮಾದರಿ :**

| | | | | | | |
|---|---|---|---|---|---|---|
| ಗೆ | ಮ | ಲ್ಲಿ | | | = | ಮ ಲ್ಲಿ ಗೆ |
| ಬ | ಲು | ಬ | ಯ | ಟ್ಟ | = | |
| ರ | ಗಾ | ಗು | ಬ | ಸೊ | = | |
| ಜೆ | ರಿ | ಗಿ | | | = | |
| ಯಿ | ಚ್ಚೆ | ಪ | ರು | ಪ | = | |
| ರ | ಗು | ಸೆ | | | = | |
| ಮಾ | ದ | ನ | ಲೆ | ಮ | = | |



ಈ) ಕೆಳಗೆ ಕೊಟ್ಟಿರುವ ಪ್ರತಿ ಚೌಕದ ಗುಂಪಿನಲ್ಲಿ ಒಂದು ಅಕ್ಷರವನ್ನು ಮಾತ್ರ ಕೊಟ್ಟಿದೆ. ಉಳಿದ ಚೌಕಗಳಲ್ಲಿ ಅಕ್ಷರಗಳನ್ನು ತುಂಬಿರಿ. ಮಾದರಿಯಲ್ಲಿ ಕೊಟ್ಟಿರುವಂತೆ ಪ್ರಾಸ ಪದಗಳು ಬರುತ್ತವೆ.

**ಮಾದರಿ:**

| | | | | | | | |
|---|---|---|---|---|---|---|---|
| | | | ಅಂ | | ಕಂ | | ಬಂ |
| | ದ | ಚಂ | ದ | ನಂ | ದ | ತಂ | ದ |




## ಭಾಷಾ ಚಟುವಟಿಕೆ

ಅ) ಪ್ರಕೃತಿ ವರ್ಣನೆಯ ಪದ್ಯಗಳನ್ನು ಸಂಗ್ರಹಿಸಿರಿ.

ಆ) ಬೇಂದ್ರೆಯವರು ಬರೆದಿರುವ ಜಲಪಾತದ ವರ್ಣನೆಯ ಕವನವನ್ನು ಓದಿರಿ. ಶಿಕ್ಷಕರ ಸಹಾಯದಿಂದ ಪ್ರಾಸಪದಗಳನ್ನು ಪಟ್ಟಿಮಾಡಿರಿ.

ತಡಸಲು ತಡಸಲು ಅಗೊ ಅಲ್ಲಿ
ದಡದಡ ಎನುವದು ಎದೆ ಇಲ್ಲಿ
ದಿಡುಗದೊ ಗುಡುಗುಡು ಗುಡುಗುತಿದೆ
ಗಿಡ, ಮರ, ಜನ, ಮನ ನಡುಗುತಿದೆ.

ಗುಡುಗೇ ನೀರಾಗಿಹುದಲ್ಲಿ
ಮೋಡ ಹುಟ್ಟುತಿದೆ ಮಳೆಯಲ್ಲಿ
ತುಂತುರ ಮಳೆ ಹೊಳೆಯಂಚಿಗಿದೆ
ನೀರೆ ಮಿರಿ ಮಿರಿ ಮಿಂಚುತಿದೆ.

ಮುತ್ತಿನ ಸರಗು ಹರಿಯುತಿವೆ
ಗಾಜುಗಂಬಗಳು ಸುರಿಯುತಿವೆ
ಕಾಮನಬಿಲ್ ಮಣಿದಾಡುತಿವೆ
ನೀರಿನ ಹೂ ಕುಣಿದಾಡುತಿವೆ

ನೆಲಮುಗಿಲ್ಗಳ ನಡುವಿನ ಬೆಡಗು
ರಮ್ಯಭಯಂಕರವೀ ದಿಡುಗು!
ಅದ್ಭುತ ಕರೆವುದು 'ಬಾ ಇಲ್ಲಿ'
ಭಯ ಗದರಿಸುತಿದೆ 'ನಿಲ್ಲಲ್ಲಿ'

ಮನ ಧುಮುಕುತ್ತಿದೆ ಹೊಳೆಯಂತೆ
ಸ್ತಂಭಿತ ಮೈ, ತಡಸಿಲಿನಂತೆ
ನಿಂತಲ್ಲಿಯೆ ಕಾಲಂಟಿತ್ತು
ಊಹೆ ದಿಗಂತಕೆ ಹೊಂಟಿತ್ತು

ಇ) ಕೆಳಗಿನ ಸನ್ನಿವೇಶವನ್ನು ನೋಡಿ ನಾಲ್ಕೈದು ವಾಕ್ಯಗಳನ್ನು ಬರೆಯಿರಿ.



______________________________________________

______________________________________________

______________________________________________

______________________________________________

______________________________________________



## ವ್ಯಾಕರಣ

೧. **ಸಂಯುಕ್ತಾಕ್ಷರಗಳು (ಒತ್ತಕ್ಷರಗಳು):** ಎರಡು ಅಥವಾ ಎರಡಕ್ಕಿಂತ ಹೆಚ್ಚು ವ್ಯಂಜನಗಳಿಗೆ ಒಂದು ಸ್ವರ ಸೇರಿ ಉಂಟಾಗುವ ಅಕ್ಷರಗಳು.

**ಉದಾ:** ಅಕ್ಕ, ಕತ್ತೆ, ಅಜ್ಜ, ಅಕ್ಷರ, ಮಿತ್ರ.

# ೬. ಬೆಳದಿಂಗಳ ಊಟ



– ಸಂಗ್ರಹ

**ಪ್ರವೇಶ :**

ಹಳ್ಳಿಯ, ನಗರದ ಆಹಾರ, ರೀತಿ ನೀತಿ, ಭಾಷೆ, ಸಂಸ್ಕಾರ, ವೇಷಭೂಷಣ, ಮನೋಭಾವ, ಸೌಲಭ್ಯಗಳಲ್ಲಿ ವ್ಯತ್ಯಾಸಗಳಿರುತ್ತವೆ. ಆದರೆ ಇದರ ಮಧ್ಯೆ ಮಾನವೀಯ ಸೆಲೆಯೊಂದು ಹಳ್ಳಿ ಮತ್ತು ನಗರದವರೆಲ್ಲರನ್ನೂ ಬಂಧಿಸುತ್ತದೆ. ಬಂಧು ಮಿತ್ರರೆಲ್ಲರೂ ಸೇರಿ ಸುಖ ದುಃಖ ಹಂಚಿಕೊಂಡು ಕೌಟುಂಬಿಕ ಸಮಾರಂಭಗಳಲ್ಲಿ ಬೆರೆತಾಗ ಪರಸ್ಪರ ವಿಷಯಗಳ ವಿನಿಮಯವಾಗಿ ಮನಸ್ಸಿಗೆ ಆನಂದವಾಗಿ, ಆತ್ಮೀಯತೆ ಹೆಚ್ಚುತ್ತದೆ.

ಹುನ್ನೂರು ಎಂಬುದೊಂದು ಪುಟ್ಟ ಹಳ್ಳಿ. ಪರಸಪ್ಪಜ್ಜ ಆ ಊರಿನ ಮುಖ್ಯಸ್ಥರು. ಅವರಿಗೆ ಶಿವಪ್ಪ ಮತ್ತು ಬಸಪ್ಪ ಎಂಬ ಇಬ್ಬರು ಗಂಡು ಮಕ್ಕಳು. ಹಿರಿಯ ಮಗ ಶಿವಪ್ಪ ತನ್ನ ಸಂಸಾರದೊಂದಿಗೆ ಬೆಂಗಳೂರಿನಲ್ಲಿ ವಾಸವಾಗಿದ್ದನು. ಅವನಿಗೆ ಶ್ವೇತಾ ಎಂಬ ಮಗಳಿದ್ದಳು. ಕಿರಿಯ ಮಗ ಬಸಪ್ಪ, ಅವನ ಹೆಂಡತಿ ಗಂಗವ್ವ. ಇವರಿಗೆ ಗೀತಾ ಮತ್ತು ರಾಮು ಎಂಬ ಇಬ್ಬರು ಮಕ್ಕಳು. ಬಸಪ್ಪನು ತಂದೆ, ತಾಯಿಯ ಸೇವೆ ಮಾಡುತ್ತ ಹೊಲಗದ್ದೆಗಳಲ್ಲಿ ಕೆಲಸ ಮಾಡುತ್ತಿದ್ದನು. ಬಹುದಿನಗಳ ಅನಂತರ ಬೆಂಗಳೂರಿನಿಂದ ದೊಡ್ಡಪ್ಪ ತಮ್ಮ ಕುಟುಂಬದವರೊಂದಿಗೆ ರಜೆಗೆ ಊರಿಗೆ ಬರುವ ಸುದ್ದಿ ಗೀತಾ, ರಾಮುಗೆ ತಿಳಿಯಿತು. ಸಂತೋಷದಿಂದ ತಾಯಿಗೆ “ಒಂದು ದಿನ ಬೆಳದಿಂಗಳ ಊಟ ಮಾಡೋಣ” ಎಂದು ಹೇಳಿದರು. ಆಕೆ ತನ್ನ ಗಂಡನಿಗೆ ವಿಷಯ ಹೇಳಿದಳು.

**ಗಂಗವ್ವ** : ರೀ... ಮಕ್ಳು ಬೆಳದಿಂಗಳ ಊಟ ಮಾಡೋಣ ಅಂತಾರಲ್ಲ, ಮಾಡೋಣೇನ್ರೀ?

**ಬಸಪ್ಪ** : ಹುಂ! ಮಾಡೋಣ! ಸಂಬಂಧಿಕರನ್ನು, ಅಕ್ಕಪಕ್ಕದವರನ್ನ ಕರೀರಿ. ನಾನು ನನ್ನ ಗೆಳ್ಯಾರನ್ನು ಕರೀತೀನಿ, ಅಣ್ಣನ ಪರಿವಾರ ಭಾಳಾ ದಿನದ ಮೇಲೆ ಊರಿಗೆ ಬರ್‍ತಾ ಅದ. ನಾಳೇನೆ ಹುಣ್ಣಿಮಿ ಅದ. ಬೆಳದಿಂಗಳ ಊಟ ಮಾಡೋಣ. ಅಡಿಗೆ ಏನೇನು ಮಾಡ್ತಿ?

**ರಾಮು** : ಅವ್ವಾ... ಅವ್ವಾ... ...ಶೇಂಗಾ ಹೋಳಗಿ, ಬುಂದೆ ಉಂಡಿ ಮಾಡು.

**ಗೀತಾ** : ಬದನೆಕಾಯಿ ತುಂಬಗಾಯಿ, ಸಜ್ಜಿರೊಟ್ಟಿ, ಚಪಾತಿ, ಬೆಣ್ಣಿ, ಗುರೆಳ್ಳುಚಟ್ನಿ ಮಾಡವ್ವ..... ಆಹಾ ! ಬಾಯಲ್ಲಿ ನೀರು ಬಂತು!

**ಬಸಪ್ಪ** : ಮಡಕೆಕಾಳ ಉಸುಳಿ, ಕೆನೆಮೊಸರು ಮಾಡು. ಹೊಲದಿಂದ ತೊಪ್ಲುಉಳ್ಳಾಗಡ್ಡಿ ತರಸು.

**ಗಂಗವ್ವ** : ಬ್ಯಾಳಿ ಕೂಡಿಸಿದ ಅನ್ನ, ಮಜ್ಗಿ ಕಾಸಿದ ಸಾರು ಮಾಡ್ತೀನಿ. ನಿಮ್ಮ ಅಣ್ಣಗೆ ಭಾಳ ಇಷ್ಟ. ಒಂದಿಷ್ಟು ಅಂಬಲಿ ಮಾಡ್ಲೇನು?

**ಬಸಪ್ಪ** : ನೋಡು, ಬೆಂಗಳೂರಿನಂತಹ ದೊಡ್ಡ ಊರಾಗ ಬೆಳದ ಹುಡುಗಿ, ಇದನ್ನೆಲ್ಲಾ ತಿಂತಾಳಿಲ್ಲೋ ವಿಚಾರಿಸು. ಮತ್ತ... ಅಜ್ಜಾ, ಅಜ್ಜಿಯವರಿಗೆ ಸಾವಕಾಶವಾಗಿ ಮಾಳಗಿ ಹತ್ತಿಸು.

(ಮಾರನೆ ದಿನ)

**ರಾಮು** : ಅವ್ವಾ! ಅವ್ವಾ! ಊರಿಂದ ದೊಡ್ಡಪ್ಪ ಅವರೆಲ್ಲಾ ಬಂದ್ರು!

(ಎಲ್ಲರೂ ಸಂತೋಷದಿಂದ ಓಡಿ ಬರುವರು)

**ಗಂಗವ್ವ** : ಬರ್ರಿ......ಬರ್ರಿ....... ಚೀಲ ತರ್ರಿ. ಗೀತಾ, ಕಾಲು ತೊಳಕೊಳ್ಳಾಕ ನೀರು ತಗೊಂಡು ಬಾ. (ಗೀತಾ ನೀರು ತರುವಳು. ಎಲ್ಲರೂ ಕಾಲು ತೊಳೆದುಕೊಂಡು ಒಳಗೆ ಬರುವರು)

**ಶಿವಪ್ಪ** : ನೀ ಗೀತಾ ಅಲ್ಲ್ವಾ ! ಎಷ್ಟು ದೊಡ್ಡವಳಾಗಿದ್ದೀ ! ರಾಮೂನೂ ಎತ್ತರ ಬೆಳದಿದ್ದಾನೆ !

**ಬಸಪ್ಪ** : ಅಣ್ಣಾ, ಬಹಳ ದಿನದ ಮ್ಯಾಲೆ ಊರಿಗೆ ಬಂದಿದ್ದೀರಿ. ಭಾಳ ಸಂತೋಷ ಆತು. ನೀವೆಲ್ಲರೂ ಬರ್‍ತೀರಿ ಅಂತ ಊರಿನ ಬಂಧು-ಮಿತ್ರರನ್ನ ಕರೆದು ಬೆಳದಿಂಗಳ ಊಟ ಇಟ್ಟೀವಿ.

**ಶಿವಪ್ಪ** : ಬಹಳ ದಿನಗಳಿಂದ ಊರಿನ ಜನರ ಭೇಟಿ ಆಗಿದ್ದಿಲ್ಲ, ಒಳ್ಳೆಯದಾಯ್ತು.

**ರಾಮು** : ಶ್ವೇತಾ, ಗೀತಾ ಬರ್ರಿಲ್ಲೆ ! ಮಾಳಗಿ ಮ್ಯಾಲೆ ಹೋಗೂಣು.

**ಶ್ವೇತಾ** : (ಇಬ್ಬರೂ ರಾಮು ಹತ್ತಿರ ಬಂದು) ಮಾಳಗಿ ಮೇಲೆ ಏನಿದೆ?

**ರಾಮು** : ಇವತ್ತ ಬೆಳದಿಂಗಳ ಊಟಾ ಮಾಡೂದದ. ಬಹಳ ಜನ ಬರ್‍ತಾರ. ಎಲ್ಲಾ ತರಾ ಬ್ಯಾರೆ ಬ್ಯಾರೆ ಅಡಿಗೆ ಮಾಡ್ಯಾರ.

**ಶ್ವೇತಾ** : 'ಬೆಳದಿಂಗಳ ಊಟ' ಎಂದರೇನು?

**ಗೀತಾ** : ಇವತ್ತ ಹುಣ್ಣಿಮಿ. ಚಂದ್ರಾಮ ದೊಡ್ಡವನಾಗಿ, ಗುಂಡಾಗಿರ್‍ತಾನ. ಟ್ಯೂಬ್‌ಲೈಟ್ ಹಚ್ಚಿದಾಂಗ ಚಂದ್ರನ ಬೆಳಕು ಇರ್‍ತದ. ಆ ಬೆಳಕಿನ್ಯಾಗ ಕುಳಿತು ಎಲ್ಲಾರೂ ಕೂಡೆ ಹರಟೆ ಹೊಡೆಯುತ್ತ ಊಟ ಮಾಡುದಕ್ಕ 'ಬೆಳದಿಂಗಳ ಊಟ' ಅಂತಾರ.

**ಶ್ವೇತಾ** : ನಾವು ಬೆಂಗಳೂರಿನಲ್ಲಿ ಪಿಜ್ಜಾ, ಬರ್ಗರ್, ಗೋಬಿಮಂಚೂರಿ, ನೂಡಲ್ಸ್‌ಗಳಂತಹ ತಿನಿಸುಗಳನ್ನು ತಿಂದು ಬೇಸರವಾಗಿದೆ. ಒಳ್ಳೆಯದಾಯ್ತು. ಬೇರೆ ಅಡುಗೆಯ ರುಚಿ ನೋಡೋಣ.

**ಗಂಗವ್ವ** : (ಕತ್ತಲಾದ ನಂತರ ಮಕ್ಕಳನ್ನು ಕರೆದು) ಗೀತಾ.. ಮಾಳಗಿ ಮ್ಯಾಲೆ ಚಾಪಿ ಹಾಸು. ನೀರಿನ ಕೊಡ, ತಾಟು, ಬಟ್ಟಲ ತಗೊಂಡ ಹೋಗು. ಬಂದವರಿಗೆ ಕೂಡಲಿಕ್ಕೆ ಜಮಖಾನಿ ಹಾಸು.

ಬಸಪ್ಪ : (ಬಂದಿರುವ ಊರಿನ ಜನರನ್ನು ಅಣ್ಣನಿಗೆ ಪರಿಚಯಿಸುತ್ತಾ ಎಲ್ಲರೂ ಸೇರಿ ಹರಟೆ ಹೊಡೆಯುವರು) ಊಟಕ್ಕೆ ಬಡಿಸಿರಿ, ಭಾಳ ಹೊತ್ತಾತು.





ಗಂಗವ್ವ : ಆಯ್ತು! (ದೊಡ್ಡವ್ವ, ಗಂಗವ್ವ ಊಟ ಬಡಿಸುವರು. ಎಲ್ಲರೂ ಆನಂದದಿಂದ ಬೆಳದಿಂಗಳ ಊಟ ಮಾಡುವರು)

ಗೀತಾ : ನನ್ನ ಊಟ ಆಗೇದ.... ದೊಡ್ಡವ್ವ ಬರ್ರೀ......ನಾನು ತಾಟಿಗೆ ಬಡಿಸಿ ಕೊಡ್ತೀನಿ. ಊಟ ಮಾಡ್ರಿ.

ದೊಡ್ಡವ್ವ : (ಊಟ ಮಾಡಲು ಪ್ರಾರಂಭಿಸುವರು) ಬೆಳದಿಂಗಳ ಊಟದ ಸಮಾರಂಭ ಬಹಳ ಚೆನ್ನಾಗಿ ಆಯ್ತು. ಅಡುಗೆ ಎಲ್ಲಾ ಚೆನ್ನಾಗಿ ಆಗಿದೆ. ನಮಗೆ ಬಹಳ ಆನಂದವಾಯ್ತು.

**ಶಿವಪ್ಪ** : ಬಹಳ ದಿನದ ನಂತರ ಸಂತೋಷದಿಂದ ಎಲ್ಲರ ಜೊತೆ ಕುಳಿತು ಹರಟೆ ಹೊಡೆಯುತ್ತಾ ಬೆಳದಿಂಗಳ ಊಟ ಮಾಡಿದೆವು. ಈ ಸಮಾರಂಭ ನಮಗೆಲ್ಲಾ ಖುಷಿ ತಂದುಕೊಟ್ಟಿತು. ಆಹಾ! ....... ಮರೆಯಲಾಗದ ಸಂತಸದ ಕ್ಷಣಗಳು!

*ಬಂಧು – ಮಿತ್ರರು ಸೇರಿ ಆಚರಿಸುವ ಸಮಾರಂಭ ಎಲ್ಲರನ್ನೂ ಒಂದುಗೂಡಿಸುತ್ತದೆ.*

**ಕ್ಷೇತ್ರ** : ಬರೆಯುವುದು.
**ಸಾಮರ್ಥ್ಯ** : ಪರಿಚಿತ ಸರಳ ಪದ, ವಾಕ್ಯಗಳನ್ನು ಬರೆಯುವುದು.

**ಪದಗಳ ಅರ್ಥ :**

ಉಳ್ಳಾಗಡ್ಡಿ–ಈರುಳ್ಳಿ; ಮುಖ್ಯಸ್ಥ–ಒಡೆಯ;
ಚಂದ್ರಾಮ–ಚಂದ್ರ; ಸಂಸಾರ–ಕುಟುಂಬ;
ತಾಟು –ಊಟದ ತಟ್ಟೆ; ಹರಟೆ–ನಿರ್ದಿಷ್ಟವಿಲ್ಲದ ವಿಷಯಗಳಲ್ಲಿ ಮಾತು;
ತೊಪ್ಪಲು–ಸೊಪ್ಪು; ಹುಣ್ಣಿಮಿ–ಹುಣ್ಣಿಮೆ;
ಮಾಳಗಿ–ಮಾಳಿಗೆ, ಅಟ್ಟ; ಹೋಳಗಿ–ಒಬ್ಬಟ್ಟು.

**ಟಿಪ್ಪಣಿ :**

ಬದನೆಕಾಯಿ ತುಂಬಗಾಯಿ – ಬದನೆಕಾಯಿಯನ್ನು ಅರ್ಧಕ್ಕೆ ನಾಲ್ಕು ಕಡೆಗೆ ಸೀಳಿ ಮಸಾಲೆಯನ್ನು ತುಂಬಿ ಮಾಡಿದ ಪಲ್ಯ.

ಸೆಜ್ಜಿರೊಟ್ಟಿ – ಸೆಜ್ಜೆಯ ಹಿಟ್ಟಿನಿಂದ ಮಾಡಿದ ತೆಳ್ಳನೆಯ ರೊಟ್ಟಿ (ಉತ್ತರ ಕರ್ನಾಟಕದ ಪ್ರಮುಖವಾದ ಆಹಾರ)

ಗುರೆಳ್ಳುಚಟ್ನಿ – ಗುರಾಳು(ಕುರೆಸಾಣಿ, ಹುಚ್ಚೆಳ್ಳು) ಹುರಿದು ಮಾಡಿದ ಚಟ್ನಿಪುಡಿ.

ಮಡಕೆಕಾಳ ಉಸುಳಿ – ಮಡಕೆಕಾಳುಗಳನ್ನು ನೆನಸಿ, ಬಟ್ಟೆಯಲ್ಲಿ ಕಟ್ಟಿ ಮೊಳಕೆ ಬರಸಿ ಕಡ್ಲೆಬೀಜ ಹಾಕಿ ಮಾಡಿದ ಉಸುಳಿ.

ಬ್ಯಾಳಿಕೂಡಿಸಿದ ಅನ್ನ – ಅಕ್ಕಿಯಲ್ಲಿ ತೊಗರಿಬೇಳೆಯನ್ನು ಸೇರಿಸಿ ಮಾಡಿದ ಅನ್ನ.

ಮಜ್ಗಿಕಾಯಿಸಿದ ಸಾರು – ಒಗ್ಗರಣೆಗೆ ಜೀರಿಗೆ, ಬೆಳ್ಳುಳ್ಳಿ, ಹಸಿಮೆಣಸಿನ ಕಾಯಿ ಹಾಕಿ ಕಡ್ಲೆಹಿಟ್ಟು ಕಲಸಿ ಮಜ್ಜಿಗೆ ಒಳಗೆ ಕುದಿಸಿದ ಸಾರು.

ಅಂಬಲಿ – ನೀರಿಗೆ ಸ್ವಲ್ಪ ರಾಗಿ ಅಥವಾ ಜೋಳದ ಹಿಟ್ಟನ್ನು ಕಲಸಿ ಉಪ್ಪು ಹಾಕಿ ಕುದಿಸಿ ಮಜ್ಜಿಗೆ ಬೆರೆಸಿದ ದ್ರವ.

ಪಿಜ್ಜಾ, ಬರ್ಗರ್, ಗೋಬಿಮಂಚೂರಿ, ನೂಡಲ್ಸ್ – ನಗರದ ಆಧುನಿಕ ತಿನಿಸುಗಳು.

## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ :**

೧. ಹುನ್ನೂರಿನ ಮುಖ್ಯಸ್ಥರು ಯಾರು?

______________________________

೨. ಪರಸಪ್ಪಜ್ಜನ ಮಕ್ಕಳ ಹೆಸರೇನು?

______________________________

೩. ಗೀತಾ ಮತ್ತು ರಾಮು ಅಮ್ಮನಿಗೆ ಏನೆಂದು ಹೇಳಿದರು?

______________________________

೪. ರಾಮು ಅಮ್ಮನಿಗೆ ಯಾವ ಯಾವ ಸಿಹಿತಿಂಡಿ ಮಾಡಲು ಹೇಳಿದನು?

______________________________

೫. ಬಸಪ್ಪನ ಅಣ್ಣನಿಗೆ ಇಷ್ಟವಾದ ಅಡುಗೆಗಳಾವುವು?

______________________________

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು – ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಮಕ್ಕಳು ಗಂಗವ್ವನಲ್ಲಿ ಏನೆಂದು ಹೇಳಿದರು?

______________________________

______________________________

______________________________

೨. ಬೆಳದಿಂಗಳ ಊಟ ಎಂದರೇನು?

______________________________

______________________________

______________________________

೩. ಬೆಳದಿಂಗಳ ಊಟದ ಖುಷಿಯ ಬಗ್ಗೆ ನಿಮ್ಮ ಮಾತುಗಳಲ್ಲಿ ಬರೆಯಿರಿ?

________________________________________

________________________________________

________________________________________

೪. ನಿಮ್ಮ ಬಂಧುಗಳ ಜೊತೆ ಸೇರಿ ಆಚರಿಸಿದ ಸಮಾರಂಭವೊಂದರ ಬಗ್ಗೆ ಬರೆಯಿರಿ.

________________________________________

________________________________________

________________________________________

________________________________________

________________________________________



## ಭಾಷಾಭ್ಯಾಸ

### ಅ. ಮಾದರಿಯಂತೆ ಬರೆಯಿರಿ :

**ಮಾದರಿ :** ತರಸು – ತರಿಸು

೧. ಹೋಗೂಣು –

೨. ಮ್ಯಾಲೆ –

೩. ಭಾಳಾ –

೪. ಗೆಳ್ಯಾರು –

### ಆ. ವಿರುದ್ಧಾರ್ಥಕ ಪದ ಬರೆಯಿರಿ :

೧. ಹಗಲು ×

೨. ಸಂತೋಷ ×

೩. ಮಿತ್ರ ×

೪. ಬೆಳಕು ×

## ಭಾಷಾ ಚಟುವಟಿಕೆ

### ಭಾಗ 'ಅ'

### ಅ) ಪದ ಮತ್ತು ವಾಕ್ಯ:

ಒಂದು ದಾಳವನ್ನು ತಯಾರಿಸಿಕೊಂಡು ಆರೂ ಕಡೆಗೆ ಒಂದೊಂದು ಪದ ಬರೆಯಿರಿ. ದಾಳ ಉರುಳಿಸಿರಿ. ಮೇಲೆ ಬಂದಿರುವ ಪದವನ್ನು ಓದಿರಿ. ಅನಂತರ ಆ ಪದವನ್ನು ಬಳಸಿಕೊಂಡು ಒಂದು ವಾಕ್ಯ ಬರೆಯಿರಿ. ಒಬ್ಬರು ಬರೆದಂತೆ ಇನ್ನೊಬ್ಬರು ಬರೆಯಬೇಡಿರಿ.

**ಮಾದರಿ :** ೧. ಆನೆಗೆ ನಾಲ್ಕು ಕಾಲುಗಳಿವೆ.
೨. ಆನೆಯು ಅತಿ ದೊಡ್ಡ ಪ್ರಾಣಿ.
೩. ಆನೆಯ ಬಣ್ಣ ಕಪ್ಪು.






### ಭಾಗ 'ಆ'

೧. ನಿಮ್ಮ ಮನೆಯಲ್ಲಿ ಬಂಧು ಮಿತ್ರರನ್ನು ಕರೆದು ಬೆಳದಿಂಗಳ ಊಟ ಏರ್ಪಡಿಸಿ ಅದರ ಅನುಭವಗಳನ್ನು ಬರೆದು, ತರಗತಿಯಲ್ಲಿ ಓದಿರಿ.

೨. ವಿವಿಧ ಇಲಾಖೆಯ ಭಿತ್ತಿಪತ್ರಗಳನ್ನು ಸಂಗ್ರಹಿಸಿ, ಓದಿ, ಬರೆಯಿರಿ.

೩. ನಿಯತಕಾಲಿಕಗಳಲ್ಲಿ ಬರುವ ವಿವಿಧ ಜಾಹೀರಾತುಗಳನ್ನು ಓದಿ ಅರ್ಥೈಸಿಕೊಳ್ಳಿರಿ.

೪. ಹಳ್ಳಿ ಮತ್ತು ನಗರ ಜೀವನದ ಅನುಕೂಲ ಮತ್ತು ಅನನುಕೂಲಗಳ ಬಗ್ಗೆ ಚರ್ಚಿಸಿರಿ.

೫. ನಗರ ಮತ್ತು ಹಳ್ಳಿಯ ವಿವಿಧ ತಿಂಡಿಗಳ ಹೆಸರುಗಳನ್ನು ಹೇಳಿ, ಪಟ್ಟಿಮಾಡಿರಿ.

೬. ನಿಮ್ಮ ಮನೆಯಲ್ಲಿ ಆಚರಿಸುವ ವಿವಿಧ ಸಮಾರಂಭಗಳ ವಿಶೇಷತೆ ತಿಳಿಸಿರಿ.

## ವ್ಯಾಕರಣ

### ಭಾಗ 'ಅ'

ಎರಡು ಅಥವಾ ಎರಡಕ್ಕಿಂತ ಹೆಚ್ಚು ವ್ಯಂಜನಗಳು ಸ್ವರದ ಜೊತೆ ಸೇರಿ ಆಗುವ ಅಕ್ಷರವೇ ಸಂಯುಕ್ತಾಕ್ಷರ.

ಸಂಯುಕ್ತಾಕ್ಷರಗಳಲ್ಲಿ ಎರಡು ವಿಧಗಳಿವೆ.

ಸಜಾತೀಯ ಸಂಯುಕ್ತಾಕ್ಷರ ಮತ್ತು ವಿಜಾತೀಯ ಸಂಯುಕ್ತಾಕ್ಷರ.

**ಸಜಾತೀಯ ಸಂಯುಕ್ತಾಕ್ಷರ:** ಒಂದು ವ್ಯಂಜನಕ್ಕೆ ಅದೇ ವ್ಯಂಜನವು ಸ್ವರದ ಜೊತೆ ಸೇರಿ ಆಗುವ ಸಂಯುಕ್ತಾಕ್ಷರ

**ಉದಾಹರಣೆ:** ನ್+ನ್+ಅ=ನ್ನ. ಕ್+ಕ್+ಅ=ಕ್ಕ, ಕ್+ಕ್+ಆ=ಕ್ಕಾ

ಸಜಾತೀಯ ಸಂಯುಕ್ತಾಕ್ಷರದಿಂದ ಕೂಡಿದ ಪದಗಳು

ಕನ್ನಡ, ನಮ್ಮ, ಅಯ್ಯಾ, ಅಜ್ಜಿ, ಅಪ್ಪ.

**ವಿಜಾತೀಯ ಸಂಯುಕ್ತಾಕ್ಷರ:** ಒಂದು ವ್ಯಂಜನಕ್ಕೆ ಬೇರೆ ವ್ಯಂಜನವು ಸ್ವರದಜೊತೆ ಸೇರಿ ಆಗುವ ಸಂಯುಕ್ತಾಕ್ಷರ

**ಉದಾಹರಣೆ:** ಕ್+ಷ್=ಕ್ಷ. ಸ್+ತ್+ರ್+ಇ =ಸ್ತ್ರೀ, ಸ್+ವ್+ಅ=ಸ್ವ

ವಿಜಾತೀಯ ಸಂಯುಕ್ತಾಕ್ಷರದಿಂದ ಕೂಡಿದ ಪದಗಳು

ಸಂಯುಕ್ತ, ಅಕ್ಷರ, ಸ್ತರ, ಭಕ್ತ ಅಜ್ಞಾನ ಮುಂತಾದವು.



**ಒತ್ತಕ್ಷರದ ಮೂರು ರೀತಿಗಳು.**

೧. ಮೂಲಾಕ್ಷರಗಳನ್ನು ಹೋಲುವ ಒತ್ತಕ್ಷರಗಳು.

ಜ್ಜ, ಟ್ಟ, ಣ್ಣ, ಬ್ಬ, ಖ್ಖ, ವ್ವ, ಞ್ಞ, ಙ್ಙ.

೨. ಮೂಲಾಕ್ಷರವನ್ನು ಹೋಲುತ್ತಿದ್ದು ತಲೆಕಟ್ಟು ರಹಿತವಾದ ಒತ್ತಕ್ಷರಗಳು

ಕ್ಕ, ಗ್ಗ, ಘ್ಘ, ಚ್ಚ, ಛ್ಛ, ಝ್ಝ, ಠ್ಠ, ಡ್ಡ, ಢ್ಢ, ಥ್ಥ, ದ್ದ, ಧ್ಧ.

ಪ್ಪ, ಫ್ಫ, ಭ್ಭ, ಶ್ಶ, ಷ್ಷ, ಸ್ಸ, ಹ್ಹ, ಳ್ಳ.

೩. ಮೂಲಾಕ್ಷರಕ್ಕೆ ಹೋಲಿಕೆ ಇಲ್ಲದ ಒತ್ತಕ್ಷರಗಳು.

ತ್ತ, ನ್ನ, ಮ್ಮ, ಯ್ಯ, ರ್ರ, ಲ್ಲ.

## ಭಾಗ 'ಆ'

**ಅ) ಕೆಳಗಿನ ಶಬ್ದಗಳಲ್ಲಿರುವ ಸಜಾತೀಯ ಸಂಯುಕ್ತಾಕ್ಷರಗಳನ್ನು ಆಯ್ದು ಹೂವಿನ ದಳಗಳಲ್ಲಿ ತುಂಬಿರಿ.**

ಹುನ್ನೂರು, ಪುಟ್ಟಹಳ್ಳಿ, ಪರಸಪ್ಪಜ್ಜ, ಶಿವಮ್ಮ, ಬಸಪ್ಪ, ಇಬ್ಬರು, ಮಕ್ಕಳು, ಗದ್ದೆ, ದೊಡ್ಡಪ್ಪ



**ಆ) ಕೆಳಗಿನ ಶಬ್ದಗಳಲ್ಲಿರುವ ವಿಜಾತೀಯ ಸಂಯುಕ್ತಾಕ್ಷರಗಳನ್ನು ಆಯ್ದು ಕೆಳಗಿನ ವೃತ್ತದಲ್ಲಿ ಬರೆಯಿರಿ.**

೧. ಗೆಳ್ಯಾರು　　೨. ಮುಖ್ಯಸ್ಥ　　೩. ಚಂದ್ರ　　೪. ಚೈತನ್ಯ

   

 



# ೭. ನುಡಿ ನುಡಿ ಕನ್ನಡ




– ಪರಶುರಾಮ ಚಿತ್ರಗಾರ

**ಪ್ರವೇಶ :**

ಕನ್ನಡಿಗರಾದ ನಮಗೆ ಕನ್ನಡ ಭಾಷೆಯ ಬಗ್ಗೆ ಆದರ, ಗೌರವ, ಅಭಿಮಾನವಿರಬೇಕು. ಕನ್ನಡ ನಾಡು – ಗಂಧದ ಗೂಡು, ಚಿನ್ನದ ಬೀಡು. ಇಲ್ಲಿನ ನೆಲ, ಜಲ, ಕೆರೆ, ತೊರೆ, ನದಿ, ಪ್ರೇಕ್ಷಣೀಯ ಸ್ಥಳಗಳು, ಶಿಲ್ಪಕಲೆಗಳು ಕನ್ನಡಿಗರ ಹಿರಿಮೆ ಗರಿಮೆಗಳನ್ನು ಉತ್ತುಂಗಕ್ಕೇರಿಸಿವೆ. ಕನ್ನಡ ಕವಿ, ಕಲಿಗಳ ಮೆಚ್ಚು ಕೆಚ್ಚುಗಳು ಇಲ್ಲಿ ಮನೋಹರವಾಗಿ ಪ್ರತಿಬಿಂಬಿತವಾಗಿವೆ.



ನುಡಿ ನುಡಿ ಕನ್ನಡ ತಾಯ್ ನುಡಿ ಕಂದ
ದುಡಿ ದುಡಿ ಕನ್ನಡದೇಳ್ಗೆಗೆ ಚಂದ

ವನಸಿರಿ ಸೊಬಗಿನ ಸುಂದರ ಬೀಡು
ಗಂಧದ ಗುಡಿಯಿದು ಕನ್ನಡ ನಾಡು।

ಕೆರೆ ತೊರೆ ಕಲರವ ಮಂಜುಳಗಾನ
ಕನ್ನಡ ನುಡಿ ಜೇನಿಂಚರ ತಾನ ।



ಕನ್ನಡ ಕವಿಗಳ ಸಿಹಿನುಡಿ ಮೆಚ್ಚು
ಕಲಿಗಳ ಹುಲಿಗಳ ಕನ್ನಡ ಕೆಚ್ಚು ।

ನೋಡಲು ಬಾ ನೀ ಜೋಗದ ಗುಂಡಿ
ಉಡುಪಿಯ ಕೃಷ್ಣನ ಕನಕನ ಕಿಂಡಿ ।

ಬಾದಾಮಿ ಐಹೊಳೆ ಕಲೆಯ ನೆಲೆ
ಬೇಲೂರು ಹಳೇಬೀಡು ಶಿಲ್ಪಕಲೆ ।

ಕನ್ನಡತನವನು ತೋರುವುವು
ಕನ್ನಡ ಹಿರಿಮೆಯ ಬೀರುವುವು ।

ತಾಯ್ ನಾಡನು ನೀ ಮರೆಯದಿರು
ತಾಯ್ ನುಡಿ ಎಂದಿಗೂ ತೊರೆಯದಿರು

*ಕನ್ನಡವೇ ಸತ್ಯ, ಕನ್ನಡವೇ ನಿತ್ಯ.*



**ಕೃತಿಕಾರರ ಪರಿಚಯ:**



ಪರಸಪ್ಪ ಹನುಮಪ್ಪ ಚಿತ್ರಗಾರರು ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕಿನ ಜಾಲೀಹಾಳದಲ್ಲಿ ೦೯-೦೧-೧೯೨೬ ರಂದು ಜನಿಸಿದರು.. ವೃತ್ತಿಯಲ್ಲಿ ಶಿಕ್ಷಕರಾಗಿದ್ದರೂ ಪ್ರವೃತ್ತಿಯಿಂದ ಮಕ್ಕಳ ಸಾಹಿತಿಗಳಾಗಿ ಗುರುತಿಸಿಕೊಂಡಿದ್ದರು. ಇವರ ಕಾವ್ಯನಾಮ **'ಪರಶುರಾಮ ಚಿತ್ರಗಾರ'**. 'ಪತಂಗ', 'ನಾವು ಭಾರತೀಯರು', 'ನಾವೆಲ್ಲಾ ಹಕ್ಕಿಗಳು', 'ವರ್ಣ ಚೈತ್ರ', 'ನಗುವ ಹೂಗಳು' ಕಥೆಯಹಾಡು ಮುಂತಾದವುಗಳು ಇವರ ಕವನ ಸಂಕಲನಗಳು.

ಈ ಪದ್ಯವನ್ನು **'ನಗುವ ಹೂಗಳು'** ಕವನ ಸಂಕಲನದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಸಾಹಿತ್ಯ ಮತ್ತು ಶಿಕ್ಷಣ ಕ್ಷೇತ್ರದಲ್ಲಿನ ಇವರ ಸಾಧನೆಯನ್ನು ಗುರುತಿಸಿ ಸರ್ಕಾರವು **'ರಾಜ್ಯ ಶಿಕ್ಷಕ'** ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.



ಕ್ಷೇತ್ರ : ಓದುವುದು.
ಸಾಮರ್ಥ್ಯ : ಸರಳ ಪದ್ಯ ಮತ್ತು ಕಥೆಗಳನ್ನು ಗಟ್ಟಿಯಾಗಿ ಓದುವುದು.

## ಪದಗಳ ಅರ್ಥ :

ಇಂಚರ –ಇಂಪಾದ ಧ್ವನಿ;
ಏಳಿಗೆ–ಅಭಿವೃದ್ಧಿ;
ಕಲರವ –ಹಕ್ಕಿಗಳ ಧ್ವನಿ;
ಕಲಿ–ವೀರ, ಶೂರ;
ಕಿಂಡಿ–ರಂಧ್ರ;
ಕೆರೆ–ಏರಿ ಹಾಕಿ ನೀರು ನಿಲ್ಲಿಸಿದ ಸ್ಥಳ;
ತೊರೆ–ಹೊಳೆ;
ದುಡಿ–ಕೆಲಸಮಾಡು, ಶ್ರಮಪಡು;
ನುಡಿ–ಮಾತು, ಭಾಷೆ;
ಮಂಜುಳ–ಮಧುರ;
ವನಸಿರಿ –ಕಾಡಿನ ಸಂಪತ್ತು;
ಸೊಬಗು–ಅಂದ, ಚೆಲುವು;
ಹಿರಿಮೆ–ಶ್ರೇಷ್ಠತೆ.



## ಟಿಪ್ಪಣಿ :

**ಜೋಗದಗುಂಡಿ** – ಶರಾವತಿ ನದಿಯ ರಾಜಾ, ರಾಣಿ, ರೋರರ್, ರಾಕೆಟ್ ಎಂಬ ನಾಲ್ಕು ಕವಲುಗಳಾಗಿ ಬೀಳುವ ಮನಮೋಹಕ ಸ್ಥಳ.

**ಶಿಲ್ಪಕಲೆ** – ಕಲ್ಲಿನಲ್ಲಿ ವಿವಿಧ ರೀತಿಯ ಆಕೃತಿಗಳನ್ನು ಕೆತ್ತುವ ಕಲೆ.

**ಕನಕನ ಕಿಂಡಿ** – ಉಡುಪಿಯಲ್ಲಿ ಕನಕದಾಸರ ಪ್ರಾರ್ಥನೆಗೆ ಒಲಿದ ಕೃಷ್ಣನ ದೇಗುಲದ ಹಿಂಬದಿಯ ಗೋಡೆಯ ಕಿಂಡಿ.

## ಅಭ್ಯಾಸ

### ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ನಾವು ಯಾವ ನುಡಿಯನ್ನು ಆಡಬೇಕು ಎಂದು ಕವಿ ಹೇಳುತ್ತಾರೆ?

______________________________

೨. ಕನ್ನಡ ನಾಡನ್ನು ಕವಿ ಎಂತಹ ಗುಡಿ ಎನ್ನುತ್ತಾರೆ?

______________________________

೩. ಕನ್ನಡ ನಾಡು ಎಂತಹ ಸೊಬಗಿನಿಂದ ಕೂಡಿದೆ ಎಂದು ಕವಿ ಹೇಳಿದ್ದಾರೆ?

___

೪. ಕನ್ನಡ ನಾಡಿನಲ್ಲಿ ಶಿಲ್ಪಕಲೆಗೆ ಹೆಸರಾದ ಊರುಗಳು ಯಾವುವು?

___

೫. ಕನಕನ ಕಿಂಡಿ ಯಾವ ಊರಿನಲ್ಲಿದೆ?

___

೬. ನಾವು ಏನನ್ನು ಮರೆಯಬಾರದು ಎಂದು ಕವಿ ಹೇಳಿದ್ದಾರೆ?

___

**ಆ) ಕೆಳಗಿನ ಪದ್ಯದ ಸಾಲನ್ನು ಪೂರ್ಣಮಾಡಿರಿ :**

ನುಡಿ ನುಡಿ ಕನ್ನಡ ತಾಯ್___

___

ವನಸಿರಿ___

___ ನಾಡು



**ಇ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಕವಿ ಪರಶುರಾಮ ಚಿತ್ರಗಾರರು ತಿಳಿಸಿರುವಂತೆ ಕನ್ನಡ ನಾಡಿನ ವಿಶೇಷತೆ ಬಗ್ಗೆ ವಿವರಿಸಿರಿ.

___

___

___

೨. ನುಡಿ ನುಡಿ ಕನ್ನಡ ಪದ್ಯದಲ್ಲಿ ಬಂದಿರುವ ಕನ್ನಡ ನಾಡಿನ ಪ್ರಸಿದ್ಧ ಪ್ರೇಕ್ಷಣೀಯ ಸ್ಥಳಗಳನ್ನು ಹೆಸರಿಸಿರಿ.

___

___

___

೩. ನೀವು ನೋಡಿರುವ ಯಾವುದಾದರೊಂದು ಪ್ರೇಕ್ಷಣೀಯ ಸ್ಥಳದ ಬಗ್ಗೆ ಬರೆಯಿರಿ.

________________________________________

________________________________________

________________________________________

## ಭಾಷಾಭ್ಯಾಸ

**ಅ) ಕೊಟ್ಟಿರುವ ಪ್ರಾಸಪದಗಳನ್ನು ಓದಿಕೊಂಡು ಬರೆಯಿರಿ.**

೧) ಕಂದ – ಚಂದ ೨) ಬೀಡು – ನಾಡು ೩) ಮೆಚ್ಚು –ಕೆಚ್ಚು

೪) ಗುಂಡಿ – ಕಿಂಡಿ ೫) ತೋರುವೆವು – ಬೀರುವೆವು

________________________________________

________________________________________



## ಭಾಷಾ ಚಟುವಟಿಕೆ

### ಭಾಗ 'ಅ'

**ಅ) ಚಿತ್ರ ನೋಡಿ ಕಥೆ ಬರೆಯಿರಿ**

**ಚಿನ್ನದ ಮೊಟ್ಟೆಯ ಕೋಳಿ**





ಕಥೆ ಬರೆದು ನೀತಿ ಬರೆಯಿರಿ : ______________________________

______________________________________________

______________________________________________

______________________________________________

**ಆ) ಮಾದರಿಯಂತೆ ಪದವನ್ನು ಓದಿ ಚೌಕದಲ್ಲಿ ಬರೆಯಿರಿ :**

ಮಾದರಿ : ಜನ




| | | | | |
|---|---|---|---|---|
| | | | | |
| | | | | |

**ಇ) ಧ್ವನಿ ವ್ಯತ್ಯಾಸವಿರುವ ಕೆಳಗಿನ ಪದಗಳನ್ನು ಉಚ್ಚರಿಸಿರಿ ಮತ್ತು ನಿಘಂಟಿನ ಸಹಾಯದಿಂದ ಅರ್ಥ ಬರೆಯಿರಿ.**

ಒಂದನೆ ____________ ವಂದನೆ ____________

ಬಲೆ ____________ ಬಳೆ ____________

ಕಾಳು ____________ ಕಾಲು ____________

ಎಮ್ಮೆ ____________ ಹೆಮ್ಮೆ ____________

ದನ ____________ ಧನ ____________

ಪಲ ____________ ಫಲ ____________.

**ಈ) ಕೊಟ್ಟಿರುವ ಪದಗಳಿಗೆ ಆವರಣದಲ್ಲಿರುವ ಪದಗಳನ್ನು ಬಳಸಿ ಪ್ರಾಸಪದ ರಚಿಸಿರಿ.**

(ಅಕ್ಕರೆ, ನಾಡು, ಸಿಹಿ, ಹಪ್ಪಳ, ನೋಡು, ಅಂದ)

ಸಪ್ಪಳ – __________ ಸಕ್ಕರೆ – __________

ಕಾಡು – __________ ಕಹಿ – __________

ಜೋಡು – __________ ಚಂದ – __________

**ಭಾಗ 'ಆ'**

೧. ಕನ್ನಡ ನಾಡಿನ ಹಿರಿಮೆಯನ್ನು ವಿವರಿಸುವ ಕವಿತೆಗಳನ್ನು ಸಂಗ್ರಹಿಸಿ ಹಾಡಿರಿ.

೨. ಕನ್ನಡದ ಜ್ಞಾನಪೀಠ ಪುರಸ್ಕೃತರ ಬಗ್ಗೆ ವಿವರ ಸಂಗ್ರಹಿಸಿ, ಪ್ರದರ್ಶಿಸಿರಿ.

೩. ಕನ್ನಡ ರಾಜ್ಯೋತ್ಸವನ್ನು ಆಚರಿಸುವ ಹಿನ್ನೆಲೆಯ ಬಗ್ಗೆ ಬರೆಯಿರಿ.

೪. ನಮ್ಮ ನಾಡಿನ ಭಾಷೆ ಯಾವುದು?

೫. ನಿಮ್ಮ ಮನೆಗಳಲ್ಲಿ ಆಡುವ ಭಾಷೆ ಯಾವುದು?

೬. ಎರಡು ತಂಡಗಳಾಗಿರಿ. ಒಂದು ತಂಡದವರು ಒಂದು ಜಿಲ್ಲೆಯ ಹೆಸರು, ಇನ್ನೊಂದು ತಂಡದವರು ಆ ಜಿಲ್ಲೆಯ ವಿಶೇಷತೆಯನ್ನು ಹೇಳುವ ಆಟವನ್ನು ಆಡಿರಿ.

# ವ್ಯಾಕರಣ

## ಭಾಗ 'ಅ'

**ವಚನಗಳು :**

ವಚನಗಳಲ್ಲಿ ಎರಡು ವಿಧ

| ಏಕವಚನ | ಬಹುವಚನ |
|---|---|
| [ಒಂದೇ ಇರುವುದು] | [ಒಂದಕ್ಕಿಂತ ಹೆಚ್ಚು ಇರುವುದು] |
| **ಉದಾಹರಣೆ :** | **ಉದಾಹರಣೆ :** |
| ಹುಡುಗ | ಹುಡುಗರು |
| ಕವಿ | ಕವಿಗಳು |
| ನಾನು | ನಾವು |
| ಮಗು | ಮಕ್ಕಳು |
| ಅಣ್ಣ | ಅಣ್ಣಂದಿರು |

## ಭಾಗ 'ಆ'

**ಅ) ಕೊಟ್ಟಿರುವ ಪದಗಳಿಗೆ ವಚನ ಬದಲಿಸಿ ಬರೆಯಿರಿ.**

೧. ಹುಡುಗಿ – ____________

೨. ತಾಯಂದಿರು – ____________

೩. ಗುಡಿಗಳು – ____________

೪. ಅಕ್ಕ – ____________

೫. ಮಗು – ____________

# ೮. ಕರಗ ಉತ್ಸವ




– ಡಾ.ಎಂ. ಸುಮಿತ್ರ

**ಪ್ರವೇಶ :**

ಕರ್ನಾಟಕವು ವಿವಿಧ ಕಲೆ ಮತ್ತು ಸಂಸ್ಕೃತಿಯ ತವರಾಗಿದೆ. ಶ್ರೀಮಂತ ಪರಂಪರೆಯನ್ನು ಹೊಂದಿದೆ. ಅನೇಕ ಹಬ್ಬ ಮತ್ತು ಜಾತ್ರೆಗಳು ಇಂದಿಗೂ ನಾಡಿನ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬರುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ಸಾಂಪ್ರದಾಯಿಕವಾಗಿ ಆಚರಿಸುವ ಇಂತಹ ಉತ್ಸವಗಳಲ್ಲಿ ನಾವು ಭಾಗವಹಿಸಬೇಕು. ಇದರಿಂದ ಬಂಧುಗಳು ಸ್ನೇಹಿತರು ಎಲ್ಲರೂ ಒಂದುಗೂಡುತ್ತಾರೆ. ಈ ಹಬ್ಬ ಜಾತ್ರೆಗಳ ಮಹತ್ವವನ್ನು ಹಿರಿಯರು ಕಿರಿಯರಿಗೆ ತಿಳಿಸುತ್ತಾರೆ. ಇಂತಹ ಜಾತ್ರೆಗಳಲ್ಲಿ ಕರಗ ಉತ್ಸವವೂ ಒಂದು. ಕರಗ ಉತ್ಸವವನ್ನು ತಮಿಳುನಾಡಿನಲ್ಲಿ ಮತ್ತು ಕರ್ನಾಟಕದ ಕೋಲಾರ, ಬೆಂಗಳೂರು ಜಿಲ್ಲೆಗಳಲ್ಲಿ ಪ್ರಧಾನವಾಗಿ ಆಚರಿಸುತ್ತಾರೆ.





ಬೆಂಗಳೂರು ಈಗ ಮಹಾನಗರವಾದರೂ ಅದು ಅನೇಕ ಹಳ್ಳಿಗಳಿಂದ ಕೂಡಿತ್ತು. ಹೀಗಾಗಿ ಬೆಂಗಳೂರಿನಲ್ಲಿ ನಡೆಯುವ ಅನೇಕ ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳಲ್ಲಿ ಜನಪದ ಸೊಗಡು ಇನ್ನೂ ಉಳಿದುಕೊಂಡಿದೆ. ಇಂತಹ ಆಚರಣೆಗಳಲ್ಲಿ ಬಸವನಗುಡಿ ಬಡಾವಣೆಯಲ್ಲಿ ನಡೆಯುವ ಕಡಲೆಕಾಯಿ ಪರಿಷೆ, ಅಣ್ಣಮ್ಮದೇವಿಯ ಉತ್ಸವಗಳು ಹಾಗೂ ಕರಗ ಮಹೋತ್ಸವಗಳು ಮುಖ್ಯವಾಗಿವೆ.

ಬೆಂಗಳೂರಿನ ಕರಗ ಉತ್ಸವವು ವಿಶ್ವವಿಖ್ಯಾತವಾಗಿದೆ. ಪ್ರತಿ ವರ್ಷ ಚೈತ್ರಮಾಸದ ಹುಣ್ಣಿಮೆಯಂದು ಈ ಕರಗ ನಡೆಯುತ್ತದೆ. ಕರಗ ಎಂದರೆ ಕಳಶ, ಕುಂಭ ಎಂಬ ಅರ್ಥವಿದೆ. ಈ ಕರಗವನ್ನು ಮಲ್ಲಿಗೆ ಹೂವಿನಿಂದ ಸಿಂಗರಿಸುತ್ತಾರೆ. ಕರಗ ಉತ್ಸವವು ಪಂಚಪಾಂಡವರ ಪತ್ನಿಯಾಗಿದ್ದ ದ್ರೌಪದಿಯನ್ನು ಕುರಿತ ಆಚರಣೆಯಾಗಿದೆ. ಕರಗ ಉತ್ಸವವನ್ನು ಕರ್ನಾಟಕದಲ್ಲಿ ತಿಗಳ ಜನಾಂಗದವರು ಆಚರಿಸುತ್ತಾರೆ. ತಿಗಳರನ್ನು ವಹ್ನಿಕುಲ ಕ್ಷತ್ರಿಯರು, ಪಳ್ಳಿಗರು ಎಂದು ಕರೆಯುತ್ತಾರೆ. ದ್ರೌಪದಿಯು ತಿಗಳರ ಕುಲದೇವತೆಯಾಗಿದ್ದಾಳೆ. ದ್ರೌಪದಿಯನ್ನು ಶಕ್ತಿದೇವತೆಯೆಂದು ಅವರು ಭಾವಿಸಿ ಭಯ ಭಕ್ತಿಯಿಂದ ಪೂಜಿಸುತ್ತಾರೆ.

ಬೆಂಗಳೂರಿನ ಹೃದಯಭಾಗದಲ್ಲಿರುವ ಕೆ.ಆರ್.ಮಾರುಕಟ್ಟೆ ವ್ಯಾಪ್ತಿಯ ನಗರ್ತಪೇಟೆಯಲ್ಲಿ ಧರ್ಮರಾಯ ದೇವಸ್ಥಾನವಿದೆ. ದೇವಸ್ಥಾನದ ಒಳ ಪ್ರಾಂಗಣದಲ್ಲಿ ಸುಂದರವಾದ ಕಲ್ಲಿನ ಆನೆಗಳನ್ನು ಕಾಣಬಹುದು. ದೊಡ್ಡ ರಾಜಗೋಪುರವಿದೆ. ಗರ್ಭಗುಡಿಯಲ್ಲಿ ಶ್ರೀಧರ್ಮರಾಯ ಮತ್ತು ಶ್ರೀಕೃಷ್ಣರ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಮುಂಭಾಗದ ಮಧ್ಯೆ ಶಕ್ತಿಪೀಠ ಸ್ಥಾಪನೆ ಮಾಡಲಾಗಿದೆ. ಅದರ ಎಡಬಲದಲ್ಲಿ ಅರ್ಜುನ ಮತ್ತು ದ್ರೌಪದಿಯ ಪಂಚಲೋಹದ ಉತ್ಸವ ಮೂರ್ತಿಗಳನ್ನು ಇಡಲಾಗಿದೆ.

ಕರಗದ ಬಗ್ಗೆ ಅನೇಕ ಪುರಾಣ ಕತೆಗಳಿವೆ. ಅದರಲ್ಲಿ ಒಂದು ಕತೆ ಹೀಗಿದೆ: ಮಹಾಭಾರತದ ಕುರುಕ್ಷೇತ್ರ ಯುದ್ಧ ಮುಗಿದ ನಂತರ ಪಾಂಡವರು ಸ್ವರ್ಗಕ್ಕೆ ಹೋಗುತ್ತಿರುತ್ತಾರೆ. ಆಗ ಪಂಚಪಾಂಡವರನ್ನು ಹಿಂಬಾಲಿಸುತ್ತಿದ್ದ ದ್ರೌಪದಿ ಪ್ರಜ್ಞೆ ತಪ್ಪಿ ಕೆಳಗೆ ಬೀಳುತ್ತಾಳೆ. ಪುನಃ ಎಚ್ಚರವಾದಾಗ ತನ್ನ ಪತಿಗಳಿಲ್ಲದ್ದನ್ನು ನೋಡಿ ಭಯದಿಂದ ಅಳುತ್ತಾಳೆ. ಈ ಸಂದರ್ಭದಲ್ಲಿ ದ್ರೌಪದಿ ಒಬ್ಬಳೇ ಇರುವುದನ್ನು ಕಂಡು ತಿಮಿರಾಸುರ ಎಂಬ ರಾಕ್ಷಸ ಅವಳನ್ನು ಪೀಡಿಸುತ್ತಾನೆ. ಇದರಿಂದ ಕೋಪಗೊಂಡ ದ್ರೌಪದಿ ಆದಿಶಕ್ತಿ ರೂಪ ತಾಳಿ ವೀರಕುಮಾರರನ್ನು ಸೃಷ್ಟಿಸಿ ರಾಕ್ಷಸನನ್ನು ಸಂಹಾರ ಮಾಡುತ್ತಾಳೆ. ಈ ವಿಜಯದ ಸಲುವಾಗಿ ಕರಗ ಹೊತ್ತು ಕುಣಿಯುತ್ತಾಳೆ. ದ್ರೌಪದಿ ಇಲ್ಲಿಯೇ ನೆಲೆಸಬೇಕೆಂದು ವೀರಕುಮಾರರು ಬೇಡಿದಾಗ ವರ್ಷಕ್ಕೊಮ್ಮೆ ಮೂರು ದಿನ ಕರಗ ಉತ್ಸವ ಮಾಡಿ ಆಗ ಬರುತ್ತೇನೆ ಎಂದು ಹೇಳುತ್ತಾಳೆ. ಇದು ತಿಗಳರ ನಂಬಿಕೆ. ಈ ಹಿನ್ನೆಲೆಯಲ್ಲಿ ಪ್ರತಿವರ್ಷ ಕರಗ ಉತ್ಸವ ನಡೆಯುತ್ತ ಬಂದಿದೆ.

ತಿಗಳರು ಪ್ರಸಿದ್ಧ ಕರಗ ಉತ್ಸವವನ್ನು ಆಚರಿಸುವುದು ಹೀಗೆ: ಹುಣ್ಣಿಮೆಯ ಮಧ್ಯರಾತ್ರಿಯಲ್ಲಿ ಬೆಳದಿಂಗಳಲ್ಲಿ ತಿಗಳ ಸಮುದಾಯದ ವ್ಯಕ್ತಿ ನಿಷ್ಠೆಯಿಂದ ಉಪವಾಸವಿದ್ದು ಕರಗ ಹೊರುತ್ತಾನೆ. ಆತ ಹಳದಿ ಬಣ್ಣದ ಸೀರೆಯುಟ್ಟು ಹಣೆಯಲ್ಲಿ ಕುಂಕುಮವಿಟ್ಟು, ಕೊರಳಿಗೆ ಸರ, ಕೈಗಳಲ್ಲಿ ಬಳೆಗಳನ್ನು ಹಾಕಿ ಸ್ತ್ರೀಯಂತೆ ವೇಷ ಧರಿಸಿರುತ್ತಾನೆ. ಮಲ್ಲಿಗೆ ಹೂವಿನಿಂದ ಅಲಂಕಾರಗೊಂಡ ಗೋಪುರಾಕಾರದ ಕರಗವನ್ನು ಆತ ಹೊರುತ್ತಾನೆ. ಆತನನ್ನು ದ್ರೌಪದಿಯೆಂದು ಭಾವಿಸುತ್ತಾರೆ. ಈ ಉತ್ಸವದಲ್ಲಿ ಗಣಾಚಾರಿ, ಗಂಟೆಪೂಜಾರಿ, ಕುಲಪುರೋಹಿತ ಮತ್ತು ವೀರಕುಮಾರರು ಮುಖ್ಯವಾಗಿ

ಭಾಗವಹಿಸುತ್ತಾರೆ. ಇವರೆಲ್ಲರು ತಿಗಳ ಜನಾಂಗದವರೇ ಆಗಿರುತ್ತಾರೆ. ಅಲ್ಲಿ ನೆರೆದಿರುವ ಸಾವಿರಾರು ಭಕ್ತರು ಗೋವಿಂದ ಗೋವಿಂದ ಎಂದು ಕೂಗುತ್ತಾರೆ. ಕರಗ ಹೊತ್ತ ವ್ಯಕ್ತಿಯ ಮೇಲೆ ಮಲ್ಲಿಗೆ ಹೂಗಳನ್ನು ಎರಚುತ್ತಾರೆ. ಮಹಿಳೆಯರು ತಂಬಿಟ್ಟನ್ನು ತಯಾರಿಸಿ ದೀಪದಾರತಿ ಮಾಡುತ್ತಾರೆ. ಈ ತಂಬಿಟ್ಟನ್ನು ಹೂಗಳಿಂದ ಅಲಂಕರಿಸುತ್ತಾರೆ. ಇವುಗಳು ನೋಡಲು ಸುಂದರವಾಗಿರುತ್ತವೆ. ತಂಬಿಟ್ಟು ಎಂದರೆ ಅಕ್ಕಿ ಮತ್ತು ಬೆಲ್ಲದಿಂದ ತಯಾರಿಸಿದ ಸಿಹಿ ದೀಪದಾಕಾರದ ಉಂಡೆ. ಕರಗ ಹೊತ್ತಿರುವ ವ್ಯಕ್ತಿಯ ಮೈಮೇಲೆ ದ್ರೌಪದಿದೇವಿ ಬರುತ್ತಾಳೆ ಎಂಬ ನಂಬಿಕೆ ಇದೆ. ಕತ್ತಿಹಿಡಿದು ಕರಗ ಹೊರುವವನ ಜತೆ ಇರುವ ವೀರಕುಮಾರರು ದೇವಿಯನ್ನು ಶಾಂತಗೊಳಿಸಲು ಡೀ-ಡಿಕ್ ಎಂದು ಅಲಗು ಸೇವೆ ಮಾಡುತ್ತಾರೆ. ದೇವಸ್ಥಾನದಿಂದ ಹೊರಟ ಕರಗ ಊರಿನ ಕೆಲವು ಮುಖ್ಯ ಭಾಗಗಳಲ್ಲಿ ಪ್ರದಕ್ಷಿಣೆ ಹಾಕುತ್ತದೆ.

ಶಕ್ತಿದೇವಿಯ ಪ್ರತೀಕವಾದ ಕರಗವನ್ನು ನಂಬಿದರೆ ಇಷ್ಟಾರ್ಥವೆಲ್ಲ ಸಿದ್ಧಿಸುತ್ತದೆಯೆಂದು ಜನರು ಹರಕೆ ಹೊರುತ್ತಾರೆ. ಭಕ್ತಿಯಿಂದ ಪೂಜೆ ಮಾಡುತ್ತಾರೆ. ಧ್ವಜಾರೋಹಣ, ಮಡಿವಂತಿಕೆ, ಪುಣ್ಯಸ್ನಾನ, ದೀಪದಾರತಿ, ಪೊಂಗಲ್ ಸೇವೆ, ಹೂವಿನ ಕರಗ, ಕೊಂಡ ಹಾಯುವುದು, ಓಕುಳಿ ಮುಂತಾದ ವಿವಿಧ ಮುಖ್ಯ ಆಚರಣೆಗಳನ್ನು ಮಾಡುತ್ತಾರೆ.

ಈ ಉತ್ಸವದಲ್ಲಿ ವಿವಿಧ ರೀತಿಯ ಸಕ್ಕರೆ ಮಿಠಾಯಿ ಅಂಗಡಿಗಳು ಇರುತ್ತವೆ. ವಿವಿಧ ನಮೂನೆಯ ಆಕರ್ಷಕ ಬಳೆಗಳನ್ನು ಮಾರುವ ಅಂಗಡಿಗಳಿರುತ್ತವೆ. ವ್ಯಾಪಾರಿಗಳು ಹೂಹಣ್ಣುಗಳನ್ನು ಮಾರುತ್ತಾರೆ. ಮಕ್ಕಳನ್ನು ಆಕರ್ಷಿಸಲು ವಿವಿಧ ರೀತಿಯ ಮಕ್ಕಳ ಆಟಿಕೆಗಳನ್ನು ಮಾರುವವರೂ ಇರುತ್ತಾರೆ.

ಬೆಂಗಳೂರು ಕರಗದಂಥ ಜಾತ್ರೆಗಳು ಜನರಲ್ಲಿ ಭಕ್ತಿಭಾವವನ್ನು ಮನರಂಜನೆಯನ್ನೂ ಮೂಡಿಸುತ್ತವೆ. ಭಕ್ತಿ, ವ್ಯಾಪಾರ ಹಾಗೂ ಮನರಂಜನೆಗಳನ್ನು ಒಳಗೊಂಡು, ಮಾನವ ಸಂಬಂಧಗಳಲ್ಲಿ ಪ್ರೀತಿ ಸೌಹಾರ್ದತೆ ಬೆಳೆಯಲು ಅವಕಾಶ ಮಾಡಿಕೊಡುತ್ತವೆ. ಜನರ ಬಾಂಧವ್ಯವನ್ನು ಬೆಸೆಯುವ ಆಚರಣೆಯಾಗಿ ಉಳಿದುಕೊಂಡಿವೆ.

**ಕ್ಷೇತ್ರ** : ಓದುವುದು.
**ಸಾಮರ್ಥ್ಯ** : ಪರಿಚಿತ ಸರಳ ಪದ, ವಾಕ್ಯಗಳನ್ನು ಓದುವುದು.

**ಕೃತಿಕಾರರ ಪರಿಚಯ:**



ಡಾ.ಎಂ. ಸುಮಿತ್ರ ಇವರು ಕೋಲಾರ ಜಿಲ್ಲೆಯ ಮಾಲೂರಿನವರು. ೭ ಮಾರ್ಚ್ ೧೯೬೮ರಲ್ಲಿ ಜನಿಸಿದರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕಿಯಾಗಿದ್ದಾರೆ. ಇವರ ಪ್ರಮುಖ ಕೃತಿಗಳು 'ಕರಗ ಸಂಪ್ರದಾಯ', 'ಕಣಿಯರ ಸಂಸ್ಕೃತಿ', 'ವಿಮರ್ಶಾ ಲೇಖನಗಳು', 'ಮಾಲೂರು ತಿಗಳರ ಸಂಸ್ಕೃತಿ', 'ಕೋಲಾರ ಜಿಲ್ಲೆಯ ಮಗ್ಗದ ಹೊಲೆಯರು', 'ಸಾಹಿತ್ಯ ಮತ್ತು ಸಂಸ್ಕೃತಿ' ಮುಂತಾದವು.

**ಪದಗಳ ಅರ್ಥ :**

ಉತ್ಸವ – ಹಬ್ಬ, ಸಮಾರಂಭ, ಸಂಭ್ರಮ, ಸಡಗರ, ಮೆರವಣಿಗೆ;

ದ್ವಾರ – ಬಾಗಿಲು;

ಧ್ವಜ – ಬಾವುಟ, ಕೇತನ, ಪತಾಕೆ;

ಪರಂಪರೆ – ಹಿಂದಿನಿಂದಲೂ ಬಂದ ಜೀವಂತ ಸಂಪ್ರದಾಯ;

ಪರಿಷೆ – ಜಾತ್ರೆ;

ವಹ್ನಿ – ಅಗ್ನಿ, ಬೆಂಕಿ.

**ಟಿಪ್ಪಣಿ :**

**ಕೊಂಡ ಹಾಯುವುದು:** ಜಾತ್ರೆಗಳಲ್ಲಿ ಭಕ್ತರು ಬೆಂಕಿಯ ಮೇಲೆ ನಡೆಯುವ ಹರಕೆಯ ಆಚರಣೆ.

**ಶಕ್ತಿಪೀಠ:** ಸ್ತ್ರೀ ದೇವತೆ ನೆಲಸಿರುವ ಪವಿತ್ರ ತಾಣ.



## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ :**

೧. ಕರಗ ಆಚರಣೆಯನ್ನು ವಿಶೇಷವಾಗಿ ಯಾವ ಪ್ರದೇಶಗಳಲ್ಲಿ ಕಾಣಬಹುದು?

________________________________

೨. ದ್ರೌಪದಿ ಯಾರು?

________________________________

೩. ಕರ್ನಾಟಕದಲ್ಲಿ ಯಾವ ಜನಾಂಗದವರು ಕರಗವನ್ನು ಆಚರಿಸುತ್ತಾರೆ?

________________________________________

೪. ಬೆಂಗಳೂರಿನಲ್ಲಿ ಕರಗವನ್ನು ಎಂದು ಆಚರಿಸುತ್ತಾರೆ?

________________________________________

೫. ಧರ್ಮರಾಯನ ದೇವಸ್ಥಾನವು ಬೆಂಗಳೂರಿನಲ್ಲಿ ಎಲ್ಲಿದೆ?

________________________________________

## ಆ) ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ದ್ರೌಪದಿಯು ವೀರಕುಮಾರರನ್ನು ಸೃಷ್ಟಿಸಲು ಕಾರಣವೇನು?

________________________________________

________________________________________

________________________________________

೨. ಬೆಂಗಳೂರಿನ ಧರ್ಮರಾಯ ದೇವಸ್ಥಾನದಲ್ಲಿ ಏನೇನನ್ನು ಕಾಣಬಹುದು?

________________________________________

________________________________________

________________________________________

೩. ಕರಗವನ್ನು ಯಾರು ಹೊರುತ್ತಾರೆ? ಅವರ ವೇಷಭೂಷಣಗಳನ್ನು ತಿಳಿಸಿರಿ.

________________________________________

________________________________________

________________________________________

೪. ಅಲಗು ಸೇವೆಯನ್ನು ಯಾರು ಮಾಡುತ್ತಾರೆ?ಏಕೆ?

________________________________________

________________________________________

________________________________________

೫. ಕರಗ ಉತ್ಸವದಲ್ಲಿ ಕಂಡುಬರುವ ಆಚರಣೆಗಳನ್ನು ಕುರಿತು ಬರೆಯಿರಿ.

______________________________________

______________________________________

______________________________________

## ಇ) ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.

೧. ದ್ರೌಪದಿಯನ್ನು ಪೀಡಿಸಿದ ರಾಕ್ಷಸ______________

೨. ತಿಗಳರ ಕುಲದೇವತೆ______________

೩. ರಾಕ್ಷಸನ ಸಂಹಾರಕ್ಕಾಗಿ ದ್ರೌಪದಿಯಿಂದ ಸೃಷ್ಟಿಯಾದವನು______________

೪. ಚೈತ್ರಮಾಸದ ಹುಣ್ಣಿಮೆಯಂದು ಬೆಂಗಳೂರಿನಲ್ಲಿ ನಡೆಯುವ ಉತ್ಸವ______________

## ಈ) ಗುಂಪಿಗೆ ಸೇರದ ಪದಗಳನ್ನು ಆರಿಸಿ ಬರೆಯಿರಿ.



೧. ಹಬ್ಬ, ಜಾತ್ರೆ, ತವರು, ಉತ್ಸವ. ______________

೨. ಕರಗ. ಕಳಶ. ಕುಂಭ, ಕುಂಕುಮ. ______________

೩. ಸೀರೆ, ಕುಂಕುಮ, ಕೈ ಬಳೆ, ದ್ರೌಪದಿ. ______________

೪. ಗಣಾಚಾರಿ, ಗಂಟೆಪೂಜಾರಿ, ಧರ್ಮರಾಯ, ವೀರಕುಮಾರರು. ______________

೫. ಧ್ವಜಾರೋಹಣ, ದೀಪದಾರತಿ, ಪಂಚಲೋಹ, ಹೂವಿನ ಕರಗ. ______________

## ಭಾಷಾಭ್ಯಾಸ

## ಅ) ಕೆಳಗಿನ ಪದಗಳನ್ನು ಬಳಸಿ ಸ್ವಂತ ವಾಕ್ಯದಲ್ಲಿ ಬರೆಯಿರಿ.

೧. ಇಷ್ಟಾರ್ಥ = ______________________

೨. ಧ್ವಜಾರೋಹಣ = ______________________

ಆ) ಕೆಳಗಿನ ಪದಗಳಿಗೆ ನಿಘಂಟುವಿನ ಸಹಾಯದಿಂದ ಸಮಾನಾರ್ಥಕ ಪದಗಳನ್ನು ಬರೆಯಿರಿ.

೧. ಪರಿಷೆ = ________ ________ ________

೨. ರಾಜ = ________ ________ ________

ಇ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದ ಬರೆಯಿರಿ.

೧. ನಂಬಿಕೆ × ________

೨. ಭಯ × ________

೩. ಸುಂದರ × ________

೪. ಮಿತ್ರ × ________

ಈ) 'ಕರಗ ಉತ್ಸವ' ಪಾಠದಲ್ಲಿ ಬರುವ ಸಜಾತೀಯ ಸಂಯುಕ್ತಾಕ್ಷರ ಮತ್ತು ವಿಜಾತೀಯ ಸಂಯುಕ್ತಾಕ್ಷರಗಳ ಪದಗಳನ್ನು ಪಟ್ಟಿ ಮಾಡಿರಿ.

| ಸಜಾತೀಯ ಸಂಯುಕ್ತಾಕ್ಷರ | ವಿಜಾತೀಯ ಸಂಯುಕ್ತಾಕ್ಷರ |
| --- | --- |
| | |

## ಉ) ಕೊಟ್ಟಿರುವ ಸೂಚನೆಯಂತೆ ಪದಬಂಧವನ್ನು ಪೂರ್ಣಗೊಳಿಸಿರಿ.

| | | | | | | | | | | |
|---|---|---|---|---|---|---|---|---|---|---|
| | ೧ | | ೨ | | | ೩ | | | | |
| ೪ | | | | ೫ | | | | | | |
| | | | | | | ೬ | | | | |
| | | ೭ | | | | | | | | |
| ೮ | | | | | | | ೯ | | | |
| | | | ೧೦ | | | | | | | |
| ೧೧ | | | | | | ೧೨ | | | | |

### ಎಡದಿಂದ ಬಲಕ್ಕೆ

೩. ಬೆಂಗಳೂರಿನ ಗ್ರಾಮ ದೇವತೆ (೫)

೪. ಕರಗದಲ್ಲಿ ತಂಬಿಟ್ಟಿನಿಂದ ಮಾಡುವ ಸೇವೆ (೫)

೬. ಧರ್ಮರಾಯನಗುಡಿ ಇರುವ ಹಳೆಯ ಬೆಂಗಳೂರಿನ ಭಾಗ (೫)

೭. ಪಾಂಡವರಲ್ಲಿ ಮೊದಲನೆಯವನು (೪)

೯. ಕರಗದಲ್ಲಿ ನೆರೆದಿರುವ ಸಾವಿರಾರು ಭಕ್ತರು ಹೀಗೆಂದು ಕೂಗುತ್ತಾರೆ (೩)

೧೦. ಚೈತ್ರ ಹುಣ್ಣಿಮೆಯಂದು ದ್ರೌಪದಿಯ ಹೆಸರಿನಲ್ಲಿ ನಡೆಯುವ ಉತ್ಸವ (೩)

೧೧. ಕರಗವನ್ನು ಅಲಂಕರಿಸಲು ಬಳಸುವ ಹೂವು (೩)

೧೨. ಕರಗದಲ್ಲಿ ಅಲಗು ಸೇವೆ ಮಾಡಿ ದೇವಿಯನ್ನು ಶಾಂತ ಮಾಡುವವರು (೫)

### ಮೇಲಿನಿಂದ ಕೆಳಗೆ

೧. ಈಕೆ ತಿಗಳರ ಕುಲದೇವತೆ (೩)

೨. ಕೊರಳಿಗೆ ಹಾಕುವ ಆಭರಣ (೨)

೩. ದ್ರೌಪದಿಯ ಉತ್ಸವಮೂರ್ತಿಯೊಂದಿಗೆ ಇರುವ ಮತ್ತೊಂದು ಉತ್ಸವಮೂರ್ತಿ (೩)

೫. ದ್ರೌಪದಿಯನ್ನು ಪೀಡಿಸಿದ ರಾಕ್ಷಸ (೫)

೮. ಕರಗಹೊರುವವನು ತನ್ನ ಹಣೆಗೆ ಇಡುವುದು (೩)

೯. ಕರಗದ ಆಕಾರ (೩)

## ಭಾಷಾ ಚಟುವಟಿಕೆ

### ಭಾಗ 'ಅ'

ಅ) ಮಾದರಿಯಂತೆ ಕೆಳಗಿನ ವೃತ್ತದಲ್ಲಿರುವ ಪದಗಳನ್ನು ಬರೆಯಿರಿ.

ಮಾದರಿ : ಹಬ್ಬ




______________________

______________________

______________________

______________________

______________________

______________________

______________________



## ಭಾಷಾ ಚಟುವಟಿಕೆ

### ಭಾಗ 'ಆ'

- ಜಾತ್ರೆಯ ಅನುಕೂಲಗಳು ಮತ್ತು ಅನಾನುಕೂಲಗಳನ್ನು ಚರ್ಚಿಸಿರಿ.
- ಮಾನವ ಸಂಬಂಧಗಳಲ್ಲಿ ಪ್ರೀತಿ-ಸೌಹಾರ್ದತೆ ಬೆಳೆಯಲು ಉತ್ಸವಗಳು ಹೇಗೆ ಸಹಕಾರಿಯಾಗಿವೆ ಚರ್ಚಿಸಿ.
- ನೀವು ನೋಡಿರುವ ಜಾತ್ರೆ, ಉತ್ಸವಗಳನ್ನು ಹಾಗೂ ಅವುಗಳ ವೈಶಿಷ್ಟ್ಯವನ್ನು ಬಣ್ಣಿಸಿರಿ.
- ಕರಗ ಉತ್ಸವದ ಆಚರಣೆಯ ಹಿನ್ನೆಲೆಯನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.
- ಕರಗ ಉತ್ಸವದ ಚಿತ್ರಗಳನ್ನು ಸಂಗ್ರಹಿಸಿ ಸೂಕ್ತ ಶೀರ್ಷಿಕೆಯನ್ನು ಬರೆಯಿರಿ.

# ವ್ಯಾಕರಣ

## ಭಾಗ 'ಅ'

### ಲಿಂಗ

**ಅ) ಲಿಂಗಗಳಲ್ಲಿ ಮೂರು ವಿಧ :**

೧. **ಪುಲ್ಲಿಂಗ:** ಯಾವ ಶಬ್ದ ಪ್ರಯೋಗ ಮಾಡಿದಾಗ ಮನುಷ್ಯವಾಚಕಗಳಲ್ಲಿ 'ಗಂಡು' ಎಂಬರ್ಥವು ಮನಸ್ಸಿಗೆ ಹೊಳೆಯುವುದೋ ಅದು ಪುಲ್ಲಿಂಗವೆನಿಸುವುದು.

**ಉದಾ :** ದೊಡ್ಡವನು, ಚಿಕ್ಕಪ್ಪ, ಹುಡುಗ, ಅಜ್ಜ, ಸಹೋದರ, ಕೆಂಪೇಗೌಡ.

೨. **ಸ್ತ್ರೀಲಿಂಗ :** ಯಾವ ಶಬ್ದ ಪ್ರಯೋಗ ಮಾಡಿದಾಗ ಮನುಷ್ಯವಾಚಕಗಳಲ್ಲಿ 'ಹೆಣ್ಣು' ಎಂಬರ್ಥವು ಮನಸ್ಸಿಗೆ ಹೊಳೆಯುವುದೋ ಅದು ಸ್ತ್ರೀಲಿಂಗವೆನಿಸುವುದು.

**ಉದಾ :** ದೊಡ್ಡವಳು, ಚಿಕ್ಕಮ್ಮ, ಹುಡುಗಿ, ಸಹೋದರಿ, ಅಜ್ಜಿ, ಚಿನ್ನಮ್ಮ

೩. **ನಪುಂಸಕಲಿಂಗ :** ಯಾವ ಶಬ್ದ ಪ್ರಯೋಗ ಮಾಡಿದಾಗ ಗಂಡೂ ಅಲ್ಲ ಹೆಣ್ಣೂ ಅಲ್ಲ ಎಂಬ ಅರ್ಥವು ಮನಸ್ಸಿಗೆ ಹೊಳೆಯುವುದೋ ಅದು ನಪುಂಸಕಲಿಂಗವೆನಿಸುವುದು.

**ಉದಾ :** ಮನೆ, ಕಲ್ಲು, ಪುಸ್ತಕ

(ಕನ್ನಡದಲ್ಲಿ ಮನುಷ್ಯರನ್ನು ಹೊರತುಪಡಿಸಿ ಎಲ್ಲಾ ಪ್ರಾಣಿಗಳೂ ನಪುಂಸಕಲಿಂಗಗಳೇ ಆಗುತ್ತವೆ.)

**ಉದಾ :** ಹುಲಿ, ಗಿಳಿ, ಕತ್ತೆ, ಕುದುರೆ, ಎತ್ತು, ನರಿ.

## ಭಾಗ 'ಆ'

**ಆ) ಲಿಂಗ ಬದಲಿಸಿ ವಾಕ್ಯ ರಚಿಸಿರಿ.**

೧. ಹುಡುಗಿ ಚೆನ್ನಾಗಿ ಹಾಡಿದಳು. : ____________

೨. ಅಪ್ಪ ಕೆಲಸಕ್ಕೆ ಹೋದನು. : ____________

೩. ಅಜ್ಜಿಯು ಕಥೆಯನ್ನು ಹೇಳಿದಳು. : ____________

೪. ರಾಜನು ಕುದುರೆ ಏರಿದನು. : ____________

# ೯. ನನ್ನ ಕಂದ




– ಜನಪದಗೀತೆ

**ಪ್ರವೇಶ :**

ಮಕ್ಕಳು ದೇವರಿಗೆ ಸಮಾನ. ತಾಯಿಗಂತೂ ತನ್ನ ಮಗುವೇ ಸರ್ವಸ್ವ. ಮಗುವಿನ ಆಟ ಪಾಠಗಳನ್ನು ಕಂಡು ಆನಂದಿಸುತ್ತಾ ತನ್ನ ಬಡತನ, ನೋವು, ಚಿಂತೆಗಳನ್ನು ಮರೆಯುತ್ತಾಳೆ. ತಾಯಿಗೆ ತನ್ನ ಮಗುವೇ ಬಾಳಿನ ಸರ್ವಸ್ವ ಅದರ ಆಟೋಟಗಳನ್ನು ಮತ್ತು ರೂಪಲಾವಣ್ಯಗಳನ್ನು ಎಷ್ಟು ಹೊಗಳಿದರೂ ತೃಪ್ತಿಯಾಗುವುದಿಲ್ಲ. ಇಂತಹ ಸತ್ಯವನ್ನು ಈ ಜನಪದ ಗೀತೆಯಲ್ಲಿ ಕಾಣಬಹುದು.





ಆಡಿ ಬಾ ನನ ಕಂದ ಅಂಗಾಲ ತೊಳೆದೇನ
ತೆಂಗಿನಕಾಯಿ ತಿಳಿನೀರ । ತಕ್ಕೊಂಡು
ಬಂಗಾರ ಮೋರೆ ತೊಳೆದೇನ ॥ ೧ ॥

ಕೂಸು ಇದ್ದ ಮನಿಗೆ ಬೀಸಣಿಕೆ ಯಾತಕ
ಕೂಸು ಕಂದಯ್ಯ ಒಳಹೊರಗ । ಆಡಿದರ
ಬೀಸಣಿಕೆ ಗಾಳಿ ಸುಳಿದಾವ ॥ ೨ ॥



ನನ್ನ ಕಂದ ಮುದ್ದು ಹೊನ್ನತಾವರಿ ಮುದ್ದು
ಹಣ್ಣುಳ್ಳ ಗಿಡದ ಗಿಣಿ ಮುದ್ದು । ಕಂದವ್ವ
ನೀ ಮುದ್ದು ನನ್ನ ಬಳಗಾಕ ॥ ೩ ॥

ಹಾವೀನ ಹೆಡಿಚೆಂದ ಮಾವೀನ ಮಿಡಿಚೆಂದ
ಹಾರ್‍ಯಾಡಿ ಬರುವ ಗಿಳಿಚೆಂದ। ನನ ಕಂದ
ನೀ ಇದ್ದರೆ ನನ್ನ ಮನಿಚೆಂದ ॥ ೪ ॥



***ಮುದ್ದು ಕಂದ ತಾಯಿಗೆ ಚೆಂದ, ಮಗುವಿನ ಆಟ ತಾಯಿಗೆ ರಸದೂಟ.***

**ಕೃತಿಕಾರರ ಪರಿಚಯ:**

ಜನಸಾಮಾನ್ಯರು ತಮ್ಮ ಜೀವನದ ನೋವು, ನಲಿವು, ಸುಖ-ದುಃಖ, ಪ್ರೀತಿವಾತ್ಸಲ್ಯಗಳ ಅನುಭವಗಳನ್ನಾಧರಿಸಿ ಹೇಳಿದ ಮೂರು ಸಾಲಿನ ಪದ್ಯವೇ ಜನಪದ ತ್ರಿಪದಿ. ಇವು ಜನರ ಬಾಯಿಂದ ಬಾಯಿಗೆ ಹರಿಯುತ್ತಾ ಬಂದಿವೆ.

**ಕ್ಷೇತ್ರ** : ಬರೆಯುವುದು.
**ಸಾಮರ್ಥ್ಯ** : ಸೂಚನೆಗಳನ್ನು ಅನುಸರಿಸಿ ವಾಕ್ಯಗಳನ್ನು ಬರೆಯುವುದು.

**ಪದಗಳ ಅರ್ಥ :**

ಅಂಗಾಲು–ಪಾದ;

ಕೂಸು–ಕಂದ, ಮಗು;

ಚಂದ–ಅಂದ, ಚೆಲುವಿಕೆ, ಸೌಂದರ್ಯ;

ತಾವರಿ–ತಾವರೆ, ಕಮಲ;

ಬಂಗಾರ–ಚಿನ್ನ, ಹೊನ್ನು, ಸುವರ್ಣ;

ಬಳಗ–ಸಂಬಂಧಿಕರು;

ಬೀಸಣಿಕೆ–ಗಾಳಿ ಬೀಸುವ ಸಾಧನ;

ಮನಿ–ಮನೆ, ಗೃಹ;

ಮಾವಿನ ಮಿಡಿ–ಮಾವಿನ ಎಳೆಕಾಯಿ;

ಮೋರೆ–ಮುಖ;

ಹಾವು–ಉರಗ, ಸರ್ಪ;

ಹೆಡಿ–ಹಾವಿನ ಹರವಾದ ತಲೆ;

ಹೆಡಿ–ಹೆಡೆ.

## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ :**

೧. ತಾಯಿಯು ಮಗುವಿನ ಮುಖವನ್ನು ಹೇಗೆ ತೊಳೆಯುತ್ತೇನೆಂದು ಹೇಳುತ್ತಾಳೆ?

_______________

೨. ಕೂಸು ಇದ್ದ ಮನೆಗೆ ಯಾವುದು ಬೇಡವೆಂದು ಜನಪದರು ಹೇಳುತ್ತಾರೆ?

_______________

೩. ತಾಯಿಗೆ ಮನೆಯಲ್ಲಿ ಯಾರು ಇದ್ದರೆ ಚೆಂದವೆನಿಸುತ್ತದೆ?

_______________

೪. ತನ್ನ ಬಳಗಕ್ಕೆ ಯಾವುದು ಮುದ್ದು ಎಂದು ತಾಯಿ ಹೇಳುತ್ತಾಳೆ?

_______________

೫. ಹಣ್ಣುಳ್ಳ ಗಿಡದಲ್ಲಿ ಯಾವುದು ಮುದ್ದು ಎಂದು ಜನಪದರು ಹೇಳಿದ್ದಾರೆ?

_______________

೬. ಯಾರು ಇದ್ದ ಮನೆಗೆ ಬೀಸಣಿಗೆ ಬೇಡ ಎಂದು ಜನಪದರು ಹೇಳಿದ್ದಾರೆ?

_______________

ಆ) 'ಅ' ಪಟ್ಟಿಯಲ್ಲಿರುವ ಪದಗಳಿಗೆ ಸರಿಹೊಂದುವ ಪದಗಳನ್ನು 'ಬ' ಪಟ್ಟಿಯಿಂದ ಆರಿಸಿ ಬರೆಯಿರಿ.

| ಅ | ಬ | ಉತ್ತರಗಳು |
| --- | --- | --- |
| ೧. ಹಾವು | ಅ) ನಡೆ | ೧. ____________ |
| ೨. ಮಾವು | ಆ) ಗಿಡ | ೨. ____________ |
| ೩. ತೆಂಗಿನಕಾಯಿ | ಇ) ಹೆಡೆ | ೩. ____________ |
| ೪. ಹಣ್ಣು | ಈ) ಮಿಡಿ | ೪. ____________ |
| | ಉ) ಎಳೆನೀರು | |

ಇ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಆಟವಾಡಿ ಬಂದ ಮಗುವನ್ನು ತಾಯಿ ಹೇಗೆ ಉಪಚರಿಸುತ್ತಾಳೆ?

____________________________________________

____________________________________________

____________________________________________

೨. ತಾಯಿಯು ಬೀಸಣಿಕೆಯ ಅವಶ್ಯವಿಲ್ಲವೆಂದು ಏಕೆ ಹೇಳುತ್ತಾಳೆ?

____________________________________________

____________________________________________

____________________________________________

೩. ತಾಯಿಯು ಯಾವ ಯಾವ ಸಂಗತಿಗಳನ್ನು ಚೆಂದ ಎನ್ನುತ್ತಾಳೆ?

____________________________________________

____________________________________________

____________________________________________

೪. ತಾಯಿಯ ಮಹತ್ವವನ್ನು ತಿಳಿಸಿರಿ.

______________________________

______________________________

______________________________

**ಈ) ಪ್ರತಿಯೊಂದು ಹೇಳಿಕೆಗೂ ನಾಲ್ಕು ಆಯ್ಕೆಗಳನ್ನು ನೀಡಲಾಗಿದೆ. ಸೂಕ್ತವಾದ ಉತ್ತರವನ್ನು ಆರಿಸಿ ಬರೆಯಿರಿ.**

೧. ಹಾರಾಡಿ ಬರುವ ಈ ಪಕ್ಷಿ ಚೆಂದ ಎಂದು ಹೇಳಲಾಗಿದೆ.______________
(ಕೋಗಿಲೆ, ಗಿಣಿ, ನವಿಲು, ಪಾರಿವಾಳ)

೨. ಮಗುವಿನ ಮೋರೆಯನ್ನು ಈ ಲೋಹಕ್ಕೆ ಹೋಲಿಸಲಾಗಿದೆ. ______________
(ಬಂಗಾರ, ಬೆಳ್ಳಿ, ತಾಮ್ರ, ಕಂಚು)

೩. ಈ ಮರದ ಮಿಡಿ ಚೆಂದ ಎನ್ನಲಾಗಿದೆ. ______________
(ಬೇವು, ಹಲಸು, ಅಡಿಕೆ, ಮಾವು)

೪. ತಾಯಿ ಈ ಕಾಯಿಯ ತಿಳಿನೀರಿನಿಂದ ಮೋರೆ ತೊಳೆಯುತ್ತಾಳೆ. ______________
(ನಿಂಬೆಕಾಯಿ, ನುಗ್ಗೆಕಾಯಿ, ತೆಂಗಿನಕಾಯಿ, ಸೌತೆಕಾಯಿ)

## ಭಾಷಾಭ್ಯಾಸ



**ಅ) ಮಾದರಿಯಂತೆ ಕೊಟ್ಟಿರುವ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬರೆಯಿರಿ.**

**ಮಾದರಿ** : ಬಂಗಾರ : ಬಂಗಾರವನ್ನು ಎಲ್ಲರೂ ಧರಿಸಲು ಇಷ್ಟಪಡುತ್ತಾರೆ.

ಮನೆ : ______________________

ಕಂದ : ______________________

ಬೀಸಣಿಕೆ : ______________________

**ಆ) ಕೆಳಗಿನ ವಾಕ್ಯಗಳನ್ನು ಅರ್ಥಪೂರ್ಣವಾಗಿ ಜೋಡಿಸಿ.**

೧. ಗಿಡದ / ಮುದ್ದು / ಹಣ್ಣುಳ್ಳ / ಗಿಣಿ ______________

೨. ಚೆಂದ / ಬರುವ / ಗಿಳಿ / ಹಾರ್‍ಯಾಡಿ ______________

೩. ಮೋರೆ / ಬಂಗಾರ / ತೊಳೆದೇನ ______________

೪. ನನ್ನ / ನೀ/ ಮನಿಚೆಂದ / ಇದ್ದರ ______________

**ಇ) ಕೆಳಗಿನ ಪದಗಳಿಗೆ ಕನ್ನಡ ರತ್ನಕೋಶ (ನಿಘಂಟು) ಬಳಸಿ ಸಮಾನಾರ್ಥಕ ಪದಗಳನ್ನು ಬರೆಯಿರಿ.**

ಕೂಸು ____________ ಗಾಳಿ ____________

ಬಂಗಾರ ____________ ಹಾವು ____________

**ಈ) ಕೆಳಗಿನ ಪದಗಳನ್ನು ಮಾದರಿಯಂತೆ ಗ್ರಾಂಥಿಕ ರೂಪಕ್ಕೆ ಬದಲಾಯಿಸಿರಿ.**

**ಮಾದರಿ** : ತಕ್ಕೊಂಡು : ತೆಗೆದುಕೊಂಡು

೧. ಯಾತಕ : ____________ ೩. ಸುಳಿದಾವ : ____________

೨. ಮನಿಗೆ : ____________ ೪. ಹೆಡಿ : ____________

## ಭಾಷಾ ಚಟುವಟಿಕೆ

### ಭಾಗ 'ಅ'

**ಅ) ಕೆಳಗಿನ ಒಗಟುಗಳನ್ನು ಬಿಡಿಸಿರಿ.**

೧. ನೋಡಲು ಎನಗೆ ರೂಪವೇ ಇಲ್ಲ, ಆದರೂ ಶಕ್ತಿಯ ಸಾಕಾರ,
ಉಸಿರು ಉಸಿರಿನಲಿ ನನ್ನ ಆಟವು, ನಾನು ಜೀವನಕೆ ಆಧಾರ.

೨. ನೀರನು ತರಲು ಹೋಗುವುದಿಲ್ಲ, ನೀರನು ಮುಟ್ಟುವುದಿಲ್ಲ
ಆದರೂ ನೀರನು ನಾ ತರುತಿರುವೆ, ನಾನಾರೆಂದು ಹೇಳಲೋ ಬಾಲ.

೩. 'ಅ' ಎಂದಾರೆ ತೆರಿತಾವ 'ಅಪ್ಪ' ಎಂದರೆ ಮುಚ್ಚುತಾವ

(ಉತ್ತರಗಳು: ೧. ಗಾಳಿ ೨. ತೆಂಗಿನಕಾಯಿ ೩. ಬಾಯಿ)

**ಆ) ಗುಂಪಿಗೆ ಸೇರದ ಪದವನ್ನು ಆರಿಸಿ ಬರೆಯಿರಿ.**

೧. ಹಾವು, ಹೂವು, ಉರಗ, ಸರ್ಪ ____________

೨. ಕಂದ, ಮಗು, ಮುದುಕ, ಕೂಸು ____________

೩. ಕಬ್ಬಿಣ, ಹೊನ್ನು, ಬಂಗಾರ, ಚಿನ್ನ ____________

೪. ಮಾವು, ಬೇವು, ಹಲಸು, ಕಲಸು ____________

## ಭಾಗ 'ಆ'

೧. 'ನನ್ನ ಕಂದ' ಪದ್ಯವನ್ನು ರಾಗವಾಗಿ ಸಾಮೂಹಿಕವಾಗಿ ಹಾಡಿರಿ.

೨. ತಾಯಿಯ ಬಗ್ಗೆ ಇರುವ ಜನಪದ ತ್ರಿಪದಿಗಳನ್ನು ಸಂಗ್ರಹ ಮಾಡಿರಿ.

೩. ತಾಯಿಯು ಮಗುವನ್ನು ಉಪಚರಿಸುವ ಸಂದರ್ಭವನ್ನು ಏಕಪಾತ್ರಾಭಿನಯದ ಮೂಲಕ ಅಭಿನಯಿಸಿರಿ.

೪. ಪತ್ರಿಕೆಗಳಲ್ಲಿ ಬರುವ ಮುದ್ದುಮಕ್ಕಳ ಚಿತ್ರಗಳನ್ನು ಹಾಗೂ ಒಗಟುಗಳನ್ನು ಸಂಗ್ರಹಿಸಿರಿ.

೫. ಶಿಶುಗೀತೆಗಳ ಧ್ವನಿಸುರುಳಿಗಳನ್ನು ಆಲಿಸಿ, ಅಭಿನಯಿಸಿರಿ.

೬. 'ತಾಯಿ' ಎಂದ ಕೂಡಲೇ ನಿಮಗೆ ನೆನಪಾಗುವ ವಿಶೇಷ ಸಂಗತಿಗಳನ್ನು ತಿಳಿಸಿರಿ.

೭. ತಾಯಿ ಮತ್ತು ಮಗುವಿನ ವಿವಿಧ ಜನಪದ ತ್ರಿಪದಿಗಳನ್ನು ಅಭಿನಯಪೂರ್ವಕವಾಗಿ ರಾಗವಾಗಿ ಹಾಡಿರಿ.

೮. ನಿಮ್ಮ ಸುತ್ತಮುತ್ತ ಪರಿಸರದಲ್ಲಿನ ಪಕ್ಷಿಗಳ, ಮರಗಳ ಹೆಸರುಗಳನ್ನು ಪಟ್ಟಿ ಮಾಡಿರಿ.

## ವ್ಯಾಕರಣ



### ಲೇಖನ ಚಿಹ್ನೆಗಳು

| | | | |
|---|---|---|---|
| ೧. ಪೂರ್ಣ ವಿರಾಮ | (.) | ೨. ಅಲ್ಪವಿರಾಮ | (,) |
| ೩. ಅರ್ಧವಿರಾಮ | (;) | ೪. ಪ್ರಶ್ನಾರ್ಥಕ ಚಿಹ್ನೆ | (?) |
| ೫. ಆಶ್ಚರ್ಯ ಸೂಚಕ | (!) | ೬. ಜೋಡಿ ಉದ್ಧರಣ ಚಿಹ್ನೆ | (" ") |
| ೭. ಒಂಟಿ ಉದ್ಧರಣ ಚಿಹ್ನೆ | (' ') | ೮. ವಿತರಣ ಚಿಹ್ನೆ | ( ಃ ) |
| ೯. ಆವರಣ ಚಿಹ್ನೆ | (( )) | | |

# ೧೦. ಆರೋಗ್ಯವೇ ಮಹಾಭಾಗ್ಯ




– ಸಂಗ್ರಹ

**ಪ್ರವೇಶ :**

'ಸದೃಢವಾದ ದೇಹದಲ್ಲಿ ಸದೃಢವಾದ ಮನಸ್ಸು ಇರುತ್ತದೆ' ಎಂಬ ಮಾತಿನಂತೆ ನಮ್ಮ ಎಲ್ಲಾ ಚಟುವಟಿಕೆಗಳನ್ನೂ ನಿರ್ವಹಿಸಲು ಶರೀರವು ಸದೃಢವಾಗಿರಬೇಕು. ಆಹಾರ, ನಿದ್ರೆ, ಹವ್ಯಾಸ, ಪರಿಸರಗಳು ನಮ್ಮ ಆರೋಗ್ಯದ ಮೇಲೆ ಪ್ರಭಾವವನ್ನು ಬೀರುತ್ತವೆ. ಚಿಕ್ಕಂದಿನಿಂದಲೇ ಮಕ್ಕಳಿಗೆ ವ್ಯಾಯಾಮ, ಯೋಗಾಸನ, ಪ್ರಾಣಾಯಾಮ, ಧ್ಯಾನ ಇವುಗಳನ್ನು ಪರಿಣಾಮಕಾರಿಯಾಗಿ ತಿಳಿಸಿದಾಗ ಆರೋಗ್ಯವೇ ಮಹಾಭಾಗ್ಯವಾಗುತ್ತದೆ.





ಒಂದು ಪುಟ್ಟ ಶಾಲೆ. ಸುತ್ತಲೂ ಸುಂದರವಾದ ವಾತಾವರಣ. ಬಗೆಬಗೆಯ ಹೂಗಿಡಗಳಿಂದ ಕಂಗೊಳಿಸುವ ಕೈತೋಟ. ವಿಶಾಲವಾದ ಆಟದ ಮೈದಾನ. ಅಲ್ಲಿ ಸದಾ ಲವಲವಿಕೆಯಿಂದ ಕಲಿಯುವ ಮಕ್ಕಳು. ಮಕ್ಕಳಲ್ಲಿ ಶಿಕ್ಷಣದ ಜೊತೆಗೆ ಉತ್ತಮ ಗುಣಗಳನ್ನು ಬೆಳೆಸುವ ಶಿಕ್ಷಕರು. ಆ ಶಾಲೆಯ ಬಗ್ಗೆ ಗ್ರಾಮಸ್ಥರಿಗೆ ತುಂಬಾ ಅಭಿಮಾನವಿತ್ತು.

ಒಂದು ವಾರದಿಂದ ಗೈರುಹಾಜರಾಗಿದ್ದ ಕಿಶೋರನ ಬಗ್ಗೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಚರ್ಚಿಸುತ್ತಿದ್ದರು. ಅದೇ ಸಮಯದಲ್ಲಿ ಕಿಶೋರನು ಶಾಲೆಗೆ ಆತಂಕದಿಂದ ನಿಧಾನವಾಗಿ ಬಂದನು.

**ಎಲ್ಲಾ ವಿದ್ಯಾರ್ಥಿಗಳು** : ಸರ್, ಅಂತೂ ಕಿಶೋರ್ ಶಾಲೆಗೆ ಬಂದನು.

**ಶಿಕ್ಷಕ** : ಕಿಶೋರ್, ನಿನ್ನ ಆರೋಗ್ಯ ಸರಿಯಿರಲಿಲ್ಲ ಎಂದು ಕೇಳಿದ್ದೆ, ಹೌದೆ?

**ಕಿಶೋರ್** : (ಆಯಾಸದಿಂದ ಉತ್ತರಿಸುತ್ತಾನೆ) 'ಹೌದು ಸರ್'.

**ಶಿಕ್ಷಕ** : ಈಗ ಹೇಗಿರುವೆ?

**ಕಿಶೋರ್** : ಆರೋಗ್ಯವಾಗಿದ್ದೇನೆ. ಒಂದು ವಾರದಿಂದ ಶಾಲೆಗೆ ಹಾಜರಾಗಲು ಸಾಧ್ಯವಾಗಲಿಲ್ಲ, ದಯವಿಟ್ಟು ಕ್ಷಮಿಸಿ ಸರ್.

**ಶಿಕ್ಷಕ** : ಇರಲಿ ಬಿಡು ಮಗು, ಒಳಗೆ ಬಾ, ಕುಳಿತುಕೋ. ಓದಿನ ಜೊತೆಗೆ ನಮಗೆ ನಿಮ್ಮೆಲ್ಲರ ಆರೋಗ್ಯವೂ ಮುಖ್ಯ. ಮಕ್ಕಳೇ, "ಮಾತು ಬಲ್ಲವನಿಗೆ ಜಗಳವಿಲ್ಲ; ಊಟ ಬಲ್ಲವನಿಗೆ ರೋಗವಿಲ್ಲ". ಎಂಬ ಗಾದೆ ಮಾತು ಕೇಳಿದ್ದೀರಾ?

**ಎಲ್ಲಾ ವಿದ್ಯಾರ್ಥಿಗಳು** : ಹೌದು ಸರ್.

**ರಮ್ಯ** : ಅಂದ್ರೆ...... ಊಟ ಮಾಡಿದರೆ ರೋಗ ಬರುವುದಿಲ್ಲವೇ ಸರ್?

**ಎಲ್ಲಾ ವಿದ್ಯಾರ್ಥಿಗಳು** : ('ಘೊಳ್' ಎಂದು ನಗುವರು)

**ಶಿಕ್ಷಕ** : ಹಾಗಲ್ಲ... ಮಕ್ಕಳೇ, ನಾವು ಆರೋಗ್ಯದ ಸೂತ್ರಗಳನ್ನು ಪಾಲಿಸಿದರೆ ಖಂಡಿತವಾಗಿಯೂ ಆರೋಗ್ಯವಾಗಿರಬಹುದು.

**ಲಿಲ್ಲಿ** : ಸರ್, ಆರೋಗ್ಯವನ್ನು ಚೆನ್ನಾಗಿ ಕಾಪಾಡಿಕೊಳ್ಳುವುದು ಹೇಗೆಂದು ತಿಳಿಸಿಕೊಡುವಿರಾ?

**ಶಿಕ್ಷಕ** : ಅಗತ್ಯವಾಗಿ ತಿಳಿಸುವೆನು. ಆಹಾರವನ್ನು ಹಿತಮಿತವಾಗಿ ಹಾಗೂ ಸಮಯಕ್ಕೆ ಸರಿಯಾಗಿ ತಿನ್ನಬೇಕು.

**ಮಂಗಳ** : ಯಾವ ರೀತಿಯ ಆಹಾರವನ್ನು ತಿನ್ನಬೇಕು ಸರ್?

**ಶಿಕ್ಷಕ** : ಸಸ್ಯಾಹಾರಿಗಳು ತರಕಾರಿ, ಸೊಪ್ಪು, ಆಯಾ ಕಾಲದಲ್ಲಿ ಬೆಳೆಯುವ ಹಣ್ಣು, ಬೇಳೆಕಾಳು, ಹಾಲು, ಮೊಸರು ಮುಂತಾದವುಗಳನ್ನು ಸೇವಿಸಬೇಕು. ಮಾಂಸಾಹಾರಿಗಳಾದವರು ಮೊಟ್ಟೆ, ಮೀನು, ಮಾಂಸ ಸೇವಿಸಬಹುದು.

**ಸುರೇಶ್** : (ಮುಖ ಕಿವುಚುತ್ತಾ) ನನಗೆ ತರಕಾರಿಗಳೆಂದರೆ ಆಗುವುದಿಲ್ಲ ಸರ್.

**ಶಿಕ್ಷಕ** : ಅದಕ್ಕೇ ನೀನು ಕಡ್ಡಿಯಂತಿರುವುದು!

**ಎಲ್ಲಾ ವಿದ್ಯಾರ್ಥಿಗಳು** : (ನಗುವರು)

| | | |
|---|---|---|
| ಶಿಕ್ಷಕ | : | ನಾನು ಹೇಳಿದ ಆಹಾರವನ್ನು ಸ್ವೀಕರಿಸುವುದರಿಂದ ದಷ್ಟಪುಷ್ಟವಾಗಿ ಬೆಳೆಯಬಹುದು, ಊಟ ಮಾಡುವಾಗ ತರಕಾರಿಗಳನ್ನು ಚೆಲ್ಲಬಾರದು. ನಮ್ಮ ಶರೀರಕ್ಕೆ ಬೇಕಾದ ಪೌಷ್ಟಿಕಾಂಶಗಳನ್ನು, ಶಕ್ತಿಯನ್ನು ಇವುಗಳಿಂದ ಪಡೆಯಬಹುದು. |





| | | |
|---|---|---|
| ಸುರೇಶ್ | : | ಇನ್ನು ಮುಂದೆ ತರಕಾರಿಗಳನ್ನು ತಿನ್ನುತ್ತೇನೆ, ಸರ್. |
| ಶಿಕ್ಷಕ | : | ಒಳ್ಳೆಯದು ಮಗು, ಆಹಾರದ ಜೊತೆಗೆ ನಿದ್ರೆಯೂ ಅಷ್ಟೇ ಮುಖ್ಯವಾಗಿದೆ. |
| ತೇಜಸ್ವಿನಿ | : | ಹಾಗಾದರೆ ಪ್ರತಿಯೊಬ್ಬರಿಗೂ ಎಷ್ಟು ಗಂಟೆಗಳಷ್ಟು ನಿದ್ರೆ ಆವಶ್ಯಕ ಸರ್? |
| ಶಿಕ್ಷಕ | : | ೬ ರಿಂದ ೮ ಗಂಟೆಗಳಷ್ಟು ನಿದ್ರೆ ಪ್ರತಿಯೊಬ್ಬರಿಗೂ ಆವಶ್ಯಕವಾಗಿದೆ. ರಾತ್ರಿ ಬೇಗ ಮಲಗಿ, ಬೆಳಗ್ಗೆ ಬೇಗ ಏಳುವುದು ಉತ್ತಮ ಅಭ್ಯಾಸವಾಗಿದೆ. |
| ಫಾತಿಮಾ | : | ನಾನು ನಿತ್ಯ ಮುಂಜಾನೆ ಏಳು ಗಂಟೆಗೆ ಏಳುತ್ತಿದ್ದೆ. ಇನ್ನು ಮುಂದೆ ಸೂರ್ಯೋದಯಕ್ಕೂ ಮೊದಲೇ ಏಳುತ್ತೇನೆ, ಸರ್. |
| ಎಲ್ಲಾ ವಿದ್ಯಾರ್ಥಿಗಳು | : | ನಾವೂ ಬೇಗ ಏಳುತ್ತೇವೆ ಸರ್. |
| ಶಿಕ್ಷಕ | : | ನೀವು ಒಳ್ಳೆಯ ಮಕ್ಕಳು. ಆಹಾರ, ನಿದ್ರೆಯ ಜೊತೆಗೆ ಸ್ವಚ್ಛತೆ ಹಾಗೂ ವ್ಯಾಯಾಮವು ಅತ್ಯಂತ ಆವಶ್ಯಕವಾಗಿದೆ. |
| ವೀಣಾ | : | ಸರ್, ವ್ಯಾಯಾಮವನ್ನು ಏಕೆ ಮಾಡಬೇಕು? |
| ಶಿಕ್ಷಕ | : | ನಾವು ಚಟುವಟಿಕೆಯಿಂದ ಇರಬೇಕು, ನಾವು ಸೇವಿಸುವ ಆಹಾರ ಜೀರ್ಣವಾಗಬೇಕು. ಅದಕ್ಕೆ ಆಟವಾಡಬೇಕು. ವ್ಯಾಯಾಮ, ಯೋಗಾಸನ, ಸೂರ್ಯನಮಸ್ಕಾರಗಳನ್ನು ಮಾಡಬೇಕು. |

ಶಶಾಂಕ : ನಾವು ನಿತ್ಯ ಆಟವಾಡುತ್ತೇವೆ, ವ್ಯಾಯಾಮ ಮಾಡುತ್ತೇವೆ. ಯೋಗಾಸನ ಮತ್ತು ಸೂರ್ಯನಮಸ್ಕಾರದ ಬಗ್ಗೆ ತಿಳಿಸಿಕೊಡುವಿರಾ ಸರ್?



ಶಿಕ್ಷಕ : ಸರಳವಾಗಿ ಹೇಳುವುದಾದರೆ ಏಕಾಗ್ರತೆಯಿಂದ ದೀರ್ಘವಾದ ಉಸಿರಾಟದೊಂದಿಗೆ ಶರೀರದ ಅಂಗಾಂಗಗಳಿಗೆ ಅಗತ್ಯವಾದ ಬಗೆಬಗೆಯ ವ್ಯಾಯಾಮವನ್ನು ಮಾಡುವುದೇ ಯೋಗಾಸನ.

ನಿಖಿಲ್ : ಹಾಗಾದರೆ, ಸೂರ್ಯನಮಸ್ಕಾರ ಎಂದರೇನು?

ಶಿಕ್ಷಕ : ಉಸಿರಾಟದ ಸಹಾಯದೊಂದಿಗೆ ಮಾಡುವ ಕೆಲವು ಯೋಗಾಸನಗಳ ಸರಣಿಯೇ ಸೂರ್ಯನಮಸ್ಕಾರ.

ಮೇರಿ : ಈ ಸೂರ್ಯನಮಸ್ಕಾರದಲ್ಲಿ ಎಷ್ಟು ಆಸನಗಳಿವೆ?

ಶಿಕ್ಷಕ : (ಸೂರ್ಯನಮಸ್ಕಾರ ಚಿತ್ರ ಪಟವನ್ನು ತೋರಿಸುತ್ತಾ) ಹತ್ತು ಆಸನಗಳು ಸೇರಿ ಸೂರ್ಯನಮಸ್ಕಾರವಾಗಿದೆ.

ರಾಮು : ಸೂರ್ಯನಮಸ್ಕಾರ ಮಾಡುವುದರಿಂದ ದೊರೆಯುವ ಪ್ರಯೋಜನವೇನು?

ಶಿಕ್ಷಕ : ಇದು ನಮ್ಮನ್ನು ಸರ್ವಾಂಗಸುಂದರರನ್ನಾಗಿ ಮಾಡುತ್ತದೆ. ವಿಶೇಷವಾಗಿ ವಿದ್ಯಾರ್ಥಿಗಳು ತಮ್ಮ ಏಕಾಗ್ರತೆಯನ್ನು ಹೆಚ್ಚಿಸಿಕೊಳ್ಳಬಹುದು ಹಾಗೂ ಆರೋಗ್ಯವಂತರಾಗಿರಬಹುದು.

ಎಲ್ಲಾ ವಿದ್ಯಾರ್ಥಿಗಳು : ತುಂಬಾ ಧನ್ಯವಾದಗಳು ಸರ್.

ಶಿಕ್ಷಕ : ಮಕ್ಕಳೇ, 'ಆರೋಗ್ಯವೇ ಮಹಾಭಾಗ್ಯ' ಎಂಬ ಸತ್ಯವನ್ನು ನಾವೆಲ್ಲರೂ ಅರಿಯಬೇಕಾಗಿದೆ.

*ರಟ್ಟೆ ಮುರಿದು ರೊಟ್ಟಿ ತಿನ್ನು. ಕೈಕೆಸರಾದರೆ ಬಾಯಿ ಮೊಸರು.*

**ಕ್ಷೇತ್ರ** : ಆಲಿಸುವುದು.

**ಸಾಮರ್ಥ್ಯ** : ಪರಿಚಿತ ಸನ್ನಿವೇಶಗಳಲ್ಲಿ ಸೂಚನೆ ಮತ್ತು ಸಂಭಾಷಣೆಗಳನ್ನು ಆಲಿಸಿ ಅರ್ಥಮಾಡಿಕೊಳ್ಳುವುದು.

## ಪದಗಳ ಅರ್ಥ :

ಆತಂಕ–ಚಿಂತೆ;
ಆಯಾಸ–ದಣಿವು;
ಕಂಗೊಳಿಸು–ಶೋಭಿಸು;
ಕಡ್ಡಿಯಂತಿರುವುದು–ಆಹಾರವಿಲ್ಲದೆ ಸೊರಗಿ ಹೋಗಿರುವುದು, ಸಣ್ಣಗಿರುವುದು;
ಖಂಡಿತ–ನಿಶ್ಚಿತ, ನಿಜವಾಗಿ;
ಗಾದೆ–ಹಿರಿಯರ ಅನುಭವದ ಮಾತು, ನಾಣ್ಣುಡಿ;
ಘೊಳ್–ನಗುವುದನ್ನು ಅನುಕರಿಸಿ ಹೇಳುವ ಪದ;
ಜೀರ್ಣ–ಪಚನ;
ದಷ್ಟಪುಷ್ಟ–ದೃಢಕಾಯ, ಬಲಿಷ್ಠ;
ಧನ್ಯವಾದ–ನಮಸ್ಕಾರ, ಕೃತಜ್ಞತೆ, ವಂದನೆ;
ಪೌಷ್ಟಿಕ–ಶಕ್ತಿವರ್ಧಕ;
ಮಿತ–ಎಲ್ಲೆ ಮೀರದ, ಕಡಿಮೆ;
ಮುಖಕಿವುಚು–ಮುಖವನ್ನು ಸಣ್ಣಗೆ ಮಾಡುವುದು, ಅಸಮಾಧಾನ ವ್ಯಕ್ತಪಡಿಸುವುದು;
ಲವಲವಿಕೆ–ಉತ್ಸಾಹ;
ವಿಶಾಲ–ಅಗಲ;
ಶರೀರ–ದೇಹ;
ಸರಣಿ–ಕ್ರಮ;
ಸೂತ್ರ–ನಿಯಮ;
ಸ್ವಚ್ಛ–ನಿರ್ಮಲ;
ಸ್ವೀಕರಿಸು–ತೆಗೆದುಕೊಳ್ಳುವುದು;
ಹಿತ–ಅನುಕೂಲ, ಯೋಗ್ಯ.



## ಅಭ್ಯಾಸ

### ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಕಿಶೋರನು ಶಾಲೆಗೆ ಏಕೆ ಗೈರುಹಾಜರಾಗಿದ್ದನು?

______________________

೨. ನಾವು ಆರೋಗ್ಯವಾಗಿರಲು ಏನು ಮಾಡಬೇಕು?

______________________

೩. ನಾವು ಯಾವ ರೀತಿಯ ಆಹಾರವನ್ನು ಸ್ವೀಕರಿಸಬೇಕು?

______________________

೪. ಪ್ರತಿಯೊಬ್ಬರಿಗೂ ಎಷ್ಟು ಗಂಟೆಗಳ ನಿದ್ರೆ ಆವಶ್ಯಕವಾಗಿದೆ?

______________________

೫. ಯೋಗಾಸನ ಎಂದರೇನು?

______________________________

೬. ಸೂರ್ಯನಮಸ್ಕಾರ ಎಂದರೇನು?

______________________________

## ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಶಾಲೆಯ ವಾತಾವರಣ ಹೇಗಿತ್ತು?

______________________________

______________________________

______________________________

೨. ಯಾವ ರೀತಿಯ ಆಹಾರವನ್ನು ಸೇವಿಸಬೇಕು ಮತ್ತು ಹೇಗೆ ಸ್ವೀಕರಿಸಬೇಕು?

______________________________

______________________________

______________________________

೩. ಸೂರ್ಯ ನಮಸ್ಕಾರದಿಂದ ಆಗುವ ಪ್ರಯೋಜನಗಳಾವುವು?

______________________________

______________________________

______________________________

೪. ನೀವು ಆರೋಗ್ಯವಾಗಿರಲು ಯಾವ ಯಾವ ಕ್ರಮಗಳನ್ನು ಅನುಸರಿಸುವಿರಿ?

______________________________

______________________________

______________________________

## ಇ) ಈ ಮಾತುಗಳನ್ನು ಯಾರು ಯಾರಿಗೆ ಹೇಳಿದರು ಬರೆಯಿರಿ.

೧. 'ಒಂದು ವಾರದಿಂದ ಶಾಲೆಗೆ ಹಾಜರಾಗಲು ಸಾಧ್ಯವಾಗಲಿಲ್ಲ'

ಯಾರು ಹೇಳಿದರು? ______________________

ಯಾರಿಗೆ ಹೇಳಿದರು? ______________________

೨. 'ಊಟ ಮಾಡಿದರೆ ರೋಗ ಬರುವುದಿಲ್ಲವೇ ಸರ್'?

ಯಾರು ಹೇಳಿದರು? ______________________

ಯಾರಿಗೆ ಹೇಳಿದರು? ______________________

೩. 'ನನಗೆ ತರಕಾರಿಗಳೆಂದರೆ ಆಗುವುದಿಲ್ಲ ಸರ್'

ಯಾರು ಹೇಳಿದರು? ______________________

ಯಾರಿಗೆ ಹೇಳಿದರು? ______________________

೪. 'ಆಹಾರ ನಿದ್ದೆಯ ಜೊತೆಗೆ ಸ್ವಚ್ಛತೆ ಹಾಗೂ ವ್ಯಾಯಾಮವು ಅತ್ಯಂತ ಅವಶ್ಯಕವಾಗಿದೆ'.

ಯಾರು ಹೇಳಿದರು? ______________________

ಯಾರಿಗೆ ಹೇಳಿದರು? ______________________



## ಈ) ಸರಿ, ತಪ್ಪು ಗುರುತಿಸಿರಿ. ಸರಿಯಾಗಿದ್ದರೆ ☑ ತಪ್ಪಿದ್ದರೆ ☒ ಹಾಕಿರಿ.

೧. ಹೆಣ್ಣುಮಕ್ಕಳು ವ್ಯಾಯಾಮ ಮಾಡಬಾರದು. ☐

೨. ವಯಸ್ಸಾದವರೂ ವ್ಯಾಯಾಮ ಮಾಡಬಹುದು. ☐

೩. ಊಟವಾದ ಕೂಡಲೇ ವ್ಯಾಯಾಮ ಮಾಡಬಹುದು. ☐

೪. ವ್ಯಾಯಾಮದಿಂದ ದೇಹಕ್ಕೆ ಅಪಾಯವಿಲ್ಲ. ☐

## ಭಾಷಾಭ್ಯಾಸ

**ಅ) ಕೆಳಗಿನ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ.**

ಶರೀರ ________________

ಸ್ವಚ್ಛ ________________

**ಆ) ಕೆಳಗಿನ ಪದಗಳಿಗೆ ಮಾದರಿಯಂತೆ ವಿರುದ್ಧಾರ್ಥಕ ಪದ ಬರೆಯಿರಿ.**

**ಮಾದರಿ :** ಆವಶ್ಯಕ × ಅನವಶ್ಯಕ

೧. ಬೇಗ × ________ ೨. ಜೀರ್ಣ × ________

೩. ಸರಳ × ________ ೪. ಶಬ್ದ × ________

**ಇ) ಕೆಳಗಿನ ಪದಗಳನ್ನು ಮಾದರಿಯಂತೆ ಬಿಡಿಸಿ ಬರೆಯಿರಿ.**

**ಮಾದರಿ :** ಸೂರ್ಯೋದಯ = ಸೂರ್ಯ + ಉದಯ

೧. ರೋಗವಿಲ್ಲ = ________ ೨. ಆಹಾರವನ್ನು = ________

೩. ಶಕ್ತಿಯನ್ನು = ________ ೪. ಆಸನಗಳಿವೆ = ________

**ಈ) 'ಅ' ಪಟ್ಟಿಯಲ್ಲಿರುವ ಪದಗಳಿಗೆ ಸರಿಹೊಂದುವ ಪದಗಳನ್ನು 'ಬ' ಪಟ್ಟಿಯಿಂದ ಆರಿಸಿ ಬರೆಯಿರಿ.**

| ಅ | ಬ | ಉತ್ತರಗಳು |
|---|---|---|
| ೧. ಖಂಡಿತ | ಅ) ನಿರ್ಮಲ | ೧. ________ |
| ೨. ಆಯಾಸ | ಆ) ಶಕ್ತಿವರ್ಧಕ | ೨. ________ |
| ೩. ಸ್ವಚ್ಛ | ಇ) ನಿಶ್ಚಿತ | ೩. ________ |
| ೪. ಪೌಷ್ಟಿಕ | ಈ) ಉತ್ಸಾಹ | ೪. ________ |
| | ಉ) ದಣಿವು | |

**ಉ) ಗುಂಪಿಗೆ ಸೇರದ ಪದವನ್ನು ಆರಿಸಿ ಬರೆಯಿರಿ.**

೧. ಮೊಸರು, ಕೆಸರು, ಬೆಣ್ಣೆ, ತುಪ್ಪ ________

೨. ಹುರುಳಿಕಾಯಿ, ಹಾಗಲಕಾಯಿ, ಬೆಂಡೆಕಾಯಿ, ಸೀಗೇಕಾಯಿ ________

೩. ಮಲ್ಲಿಗೆ, ಸಂಪಿಗೆ, ಅವರೆ, ತಾವರೆ ________

೪. ಸರ, ಜ್ವರ, ಕೆಮ್ಮು, ನೆಗಡಿ ________

ಊ) ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೇ ಪದಕ್ಕೆ ಸಂಬಂಧಿಸಿದ್ದನ್ನು ಬರೆಯಿರಿ.

**ಮಾದರಿ :** ಸೌತೆಕಾಯಿ : ತರಕಾರಿ : : ಸೇಬು : ಹಣ್ಣು

೧. ನೆಗಡಿ : ಕಾಯಿಲೆ : : ಸಂಪಿಗೆ : ____________

೨. ವಿದ್ಯಾರ್ಥಿ : ವಿದ್ಯಾರ್ಥಿನಿ : : ಶಿಕ್ಷಕ : ____________

೩. ಮೇಲೆ : ಕೆಳಗೆ : : ಗೌರವ : ____________

೪. ಮಾಂಸ : ಮಾಂಸಾಹಾರ : : ತರಕಾರಿ : ____________

## ಭಾಷಾ ಚಟುವಟಿಕೆ

### ಭಾಗ 'ಅ'

**ಇದರಲ್ಲಿರುವ ತರಕಾರಿಗಳ ಹೆಸರುಗಳನ್ನು ಪತ್ತೆ ಹಚ್ಚಿ, ಎಡಕ್ಕೂ, ಬಲಕ್ಕೂ, ಮೇಲಕ್ಕೂ, ಕೆಳಕ್ಕೂ, ಓರೆಯಾಗಿಯೂ, ಅಕ್ಷರಗಳಲ್ಲಿ ಮಾದರಿಯಂತೆ ಜೋಡಿಸಿರಿ.**

| | | | | | | | | | | |
|---|---|---|---|---|---|---|---|---|---|---|
| ಟ | ಹೂ | ಕೋ | ಸು | ಲ | ಸೌ | ಡ | ಕ್ಯಾ | ರೆ | ಟ್ | ಪ |
| ಪ | ಮೂ | ಎ | ಸ | ತೊಂ | ತೆ | ಕು | ಪ | ಮೂ | ಸ | ಡ |
| ತ | ಗ | ಟೋ | ಬೆಂ | ಡೆ | ಕಾ | ಯಿ | ತ | ಲಂ | ಡ | ವ |
| ಹಾ | ಡ | ಲ | ಪ | ಕಾ | ಯಿ | ಜ | ರ | ಗಿ | ವ | ಲ |
| ಲ | ಗ | ಮ | ಸೌ | ಯಿ | ರೆ | ಜ | ಕ | ಪ | ಲ | ಕಾ |
| ಹಾ | ರ | ಲ | ಪಿ | ಮಿ | ಮೆ | ಣ | ಸಿ | ನ | ಕಾ | ಯಿ |
| ಗ | ನು | ಗ್ಗೇ | ಕಾ | ಯಿ | ಸು | ನ | ವಿ | ಲು | ಕೋ | ಸು |

### ಭಾಗ 'ಆ'

೧. ವೈದ್ಯ ಮತ್ತು ರೋಗಿಯ ನಡುವಿನ ಸಂಭಾಷಣೆಯನ್ನು ಅಭಿನಯಿಸಿರಿ.
೨. ಈ ಗದ್ಯಭಾಗವನ್ನು ನಾಟಕ ರೂಪದಲ್ಲಿ ಅಭಿನಯಿಸಿರಿ.
೩. ಹಣ್ಣು ತರಕಾರಿಗಳ ಬಗ್ಗೆ ಇರುವ ಗೀತೆಗಳನ್ನು ಸಂಗ್ರಹಿಸಿ ಹಾಡಿರಿ.
೪. ದಿನವೂ ಸೂರ್ಯನಮಸ್ಕಾರ, ಯೋಗಾಸನ ಮಾಡಿರಿ.
೫. ನಿಮಗೆ ತಿಳಿದಿರುವ ವಿವಿಧ ತರಕಾರಿ ಹಾಗೂ ಹಣ್ಣುಗಳ ಹೆಸರುಗಳನ್ನು ಹೇಳಿ, ಅವುಗಳನ್ನು ತಿನ್ನುವುದರಿಂದ ಆಗುವ ಪ್ರಯೋಜನದ ಬಗ್ಗೆ ಚರ್ಚಿಸಿರಿ.

೬. ಕ್ರೀಡೆ, ವ್ಯಾಯಾಮ, ಪ್ರಾಣಾಯಾಮ, ಧ್ಯಾನ ಹಾಗೂ ಯೋಗಾಸನ ಇವುಗಳು ಆರೋಗ್ಯವನ್ನು ಹೇಗೆ ವರ್ಧಿಸುತ್ತವೆ? ಎಂಬುದನ್ನು ತಿಳಿಸಿರಿ.

೭. 'ಮಾತು ಬಲ್ಲವನಿಗೆ ಜಗಳವಿಲ್ಲ; ಊಟ ಬಲ್ಲವನಿಗೆ ರೋಗವಿಲ್ಲ' ಎಂಬ ಗಾದೆಯನ್ನು ವಿಸ್ತರಿಸಿ ಹೇಳಿರಿ.

## ವ್ಯಾಕರಣ

### ಭಾಗ 'ಆ'

### ಲೇಖನ ಚಿಹ್ನೆ

ಬರವಣಿಗೆಯ ವಾಕ್ಯಗಳಲ್ಲಿ ಅರ್ಥ ಸ್ಪಷ್ಟವಾಗುವಂತೆ ಬಳಸುವ ಸಂಜ್ಞೆಗಳೇ ಲೇಖನ ಚಿಹ್ನೆಗಳು. ಬರವಣಿಗೆಯಲ್ಲಿ ಲೇಖನ ಚಿಹ್ನೆಗಳನ್ನು ಬಳಸುವುದು ಬಹಳ ಮುಖ್ಯವಾದುದು.

೧. ಪೂರ್ಣವಿರಾಮ= ಒಂದು ಪೂರ್ಣಕ್ರಿಯೆಯಿಂದ ಕೂಡಿದ ವಾಕ್ಯದ ಕೊನೆಯಲ್ಲಿ ಬಳಸುವ ಚಿಹ್ನೆಯೇ ಪೂರ್ಣವಿರಾಮ (.)

೨. ಅಲ್ಪವಿರಾಮ= ವಾಕ್ಯದಲ್ಲಿ ಬೇರೆ ಬೇರೆ ವಿಶೇಷಣಗಳು ಬರುವಾಗ ಕೊನೆಯ ವಿಶೇಷಣಗಳನ್ನು ಬಿಟ್ಟು ಉಳಿದ ಪದಗಳ ಮುಂದೆ ಬಳಸುವ ಚಿಹ್ನೆಯೇ ಅಲ್ಪವಿರಾಮ (,)

೩. ಪ್ರಶ್ನಾರ್ಥಕ= ಪ್ರಶ್ನೆ ರೂಪದ ಪದ ಮತ್ತು ವಾಕ್ಯದ ಕೊನೆಯಲ್ಲಿ ಬಳಸುವ ಚಿಹ್ನೆಯೇ ಪ್ರಶ್ನಾರ್ಥಕ ಚಿಹ್ನೆ (?)

### ಭಾಗ 'ಆ'

**'ಅ' ಪಟ್ಟಿಯಲ್ಲಿರುವ ಲೇಖನ ಚಿಹ್ನೆಗಳಿಗೆ 'ಬ' ಪಟ್ಟಿಯಲ್ಲಿರುವ ಹೆಸರುಗಳನ್ನು ಹೊಂದಿಸಿ ಬರೆಯಿರಿ.**

| | 'ಅ' | 'ಬ' | ಉತ್ತರ |
|---|---|---|---|
| ೧. | ! | ಅ) ಅರ್ಧವಿರಾಮ | ________ |
| ೨. | ? | ಆ) ಅಲ್ಪವಿರಾಮ | ________ |
| ೩. | . | ಇ) ಆಶ್ಚರ್ಯಸೂಚಕ | ________ |
| ೪. | ; | ಈ) ಪ್ರಶ್ನಾರ್ಥಕ | ________ |
| ೫. | , | ಉ) ಪೂರ್ಣವಿರಾಮ | ________ |
| | | ಊ) ಉದ್ಧರಣ | ________ |

# ೧೧. ಒಂದು ಸೋಜಿಗದ ಪದ್ಯ

– ಚಂದ್ರಶೇಖರ ತಾಳ್ಯ




**ಪ್ರವೇಶ :**

ನಿಸರ್ಗದ ವಿವಿಧ ವ್ಯಾಪಾರಗಳನ್ನು ಕಂಡು ಕವಿಯು ಪಟ್ಟಿರುವ ಅಚ್ಚರಿ ಈ ಕವನದಲ್ಲಿದೆ. ಮೇಲ್ನೋಟಕ್ಕೆ ದೈನಂದಿನ ಸಾಮಾನ್ಯ ಘಟನೆಯಾಗಿ ಕಾಣುವ ಸಂಗತಿಗಳು, ಆಳವಾಗಿ ಚಿಂತಿಸಿದರೆ, ಅವುಗಳ ಒಳಗಿನ ನಿಗೂಢವು ಗೋಚರಿಸುತ್ತವೆ. ನಾವು ನಿತ್ಯ ನೋಡುವ ಬಾನು, ಭೂಮಿ, ಚುಕ್ಕಿ, ಹಕ್ಕಿ, ನೀರು, ಗಾಳಿ ಇವೆಲ್ಲವೂ ಇಂತಹ ನಿಗೂಢಗಳನ್ನು ತಮ್ಮ ಒಡಲಿನಲ್ಲಿ ಇರಿಸಿಕೊಂಡಿವೆ. ಇವೆಲ್ಲಕ್ಕಿಂತಲೂ ಕವಿಗೆ ನಿಗೂಢ ಮತ್ತು ವಿಸ್ಮಯ ಅನಿಸಿರುವುದು ಬದುಕಿನ ಒಡಲಲ್ಲೇ ಇರುವ ಸಾವು.



ನೀಲಿಯ ಬಾನಿಗೆ
ಚುಕ್ಕಿಯ ಬಿಂದಿಗೆ
ಸೋಜಿಗವೆ ಸಖಿ ಸೋಜಿಗವೆ
ಸಂಜೆಯ ರಂಗಿಗೆ
ಹಕ್ಕಿಯ ಕಲರವ
ಸೋಜಿಗವೆ ಸಖಿ ಸೋಜಿಗವೆ ॥೧॥

ನೀರಿನ ಸೆಳೆವಲಿ
ತೇಲುವ ದೋಣಿಯ
ಸೋಜಿಗವೆ ಸಖಿ ಸೋಜಿಗವೆ
ಸುರಿಯುವ ಮಳೆಯಲಿ
ಭುವನವು ನಗುತಿದೆ
ಸೋಜಿಗವೆ ಸಖಿ ಸೋಜಿಗವೆ ॥೨॥

ಪರ್ವತದೊಡಲಲಿ
ಜ್ವಾಲೆಯ ಕಾವಿದೆ
ಸೋಜಿಗವೆ ಸಖಿ ಸೋಜಿಗವೆ
ಶಿಖರದ ತುದಿಯಲಿ
ಮಂಜಿನ ಹೊದಿಕೆಯೆ
ಸೋಜಿಗವೆ ಸಖಿ ಸೋಜಿಗವೆ ॥೩॥



ಸಾಗರನೆದೆಯಲಿ
ರತ್ನದ ಗಣಿಯಿದೆ
ಸೋಜಿಗವೆ ಸಖಿ ಸೋಜಿಗವೆ
ಬೆಳಗುವ ರವಿಯಲು
ಬೆಂಕಿಯೇ ಉರಿದಿದೆ
ಸೋಜಿಗವೆ ಸಖಿ ಸೋಜಿಗವೆ ॥೪॥

ಸಾವಿನ ಬಯಲಲಿ
ಹುಟ್ಟಿನ ಬಯಕೆಯು
ಸೋಜಿಗವೆ ಸಖಿ ಸೋಜಿಗವೆ ॥೫॥

**ಕ್ಷೇತ್ರ** : ಓದುವುದು.
**ಸಾಮರ್ಥ್ಯ** : ಸೂಚನೆಗಳನ್ನು ಅನುಸರಿಸಿ ವಾಕ್ಯಗಳನ್ನು ಓದಿ ಅರ್ಥಮಾಡಿಕೊಳ್ಳುವುದು.



**ಕೃತಿಕಾರರ ಪರಿಚಯ:**



ತರ್ಕಶಾಸ್ತ್ರ ಉಪನ್ಯಾಸಕರಾಗಿ ನಿವೃತ್ತರಾಗಿರುವ ಚಂದ್ರಶೇಖರ ತಾಳ್ಯ ಅವರು ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲೂಕಿನ ತಾಳ್ಯ ಗ್ರಾಮದಲ್ಲಿ ೧೯೪೪ರಲ್ಲಿ ಜನಿಸಿದರು.. 'ನನ್ನ ಕಣ್ಣಗಲಕ್ಕೆ', 'ಸಿಂಧೂ ನದಿಯ ದಂಡೆಯ ಮೇಲೆ', 'ಸುಡುವ ಭೂಮಿ', 'ಕಾವಳದ ಸಂಜೆಯಲಿ' ಇವು ಇವರ ಕವನ ಸಂಕಲನಗಳು.

ಪ್ರಸ್ತುತ ನಿಸರ್ಗ ಗೀತೆಯಾದ ಒಂದು ಸೋಜಿಗದ ಪದ್ಯವನ್ನು 'ಕಾವಳದ ಸಂಜೆ-ಯಲಿ' ಎನ್ನುವ ಕವನ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.

## ಪದಗಳ ಅರ್ಥ :

ಚುಕ್ಕಿ – ನಕ್ಷತ್ರ;
ಕಲರವ – ಶಬ್ದ;
ಭುವನ – ಭೂಮಿ;
ಸಖಿ – ಗೆಳತಿ;
ರತ್ನದ ಗಣಿ – ಅಮೂಲ್ಯ ಹರಳುಗಳ ಆಗರ.

## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ನೀಲಿಯ ಬಾನಿನಲ್ಲಿ ಸೋಜಿಗ ಯಾವುದು?

_______________

೨. ಸಂಜೆಯ ರಂಗಿಗೆ ಸೋಜಿಗ ಯಾವುದು?

_______________

೩. ನೀರಿನ ಸೆಳೆವಲಿ ಸೋಜಿಗ ಯಾವುದು?

_______________

೪. ಭುವನವು ನಗುತಿದೆ ಏಕೆ?

_______________

೫. ಬೆಂಕಿಯ ಜ್ವಾಲೆಯು ಎಲ್ಲಿದೆ?

_______________

೬. ಮಂಜಿನ ಹೊದಿಕೆಯು ಎಲ್ಲಿದೆ?

_______________

**ಆ) ಪದ್ಯದಲ್ಲಿ ಬಿಟ್ಟಿರುವ ಮುಂದಿನ ಸಾಲುಗಳನ್ನು ಬರೆಯಿರಿ.**

೧. ಸುರಿಯುವ ಮಳೆಯಲಿ_______________

_______________

_______________ಸೋಜಿಗವೆ

೨. ಪರ್ವತ_______________

_______________

_______________ಸಖಿ ಸೋಜಿಗವೆ.

ಇ) ಕೆಳಗಿನ ಪ್ರಶ್ನೆಗಳಿಗೆ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಪರ್ವತ ಮತ್ತು ಶಿಖರಗಳಲ್ಲಿ ಇರುವ ಸೋಜಿಗ ಯಾವುದೆಂದು ತಾಳ್ಯರವರು ಹೇಳಿದ್ದಾರೆ?

________________________________________

________________________________________

________________________________________

________________________________________

೨. ಸಾಗರ ಮತ್ತು ರವಿಯಲ್ಲಿರುವ ಸೋಜಿಗವನ್ನು ಕವಿಕಂಡಂತೆ ತಿಳಿಸಿರಿ.

________________________________________

________________________________________

________________________________________

________________________________________

೩. ನಿಸರ್ಗದ ಸೋಜಿಗದ ಬಗ್ಗೆ ಕವಿಯ ಅಭಿಪ್ರಾಯವೇನು?

________________________________________

________________________________________

________________________________________

________________________________________



ಈ) 'ಅ' ಪಟ್ಟಿಗೆ ಸರಿಹೊಂದುವುದನ್ನು 'ಬ' ಪಟ್ಟಿಯಿಂದ ಆರಿಸಿ ಬರೆಯಿರಿ.

| ಅ | ಬ | ಉತ್ತರ |
|---|---|---|
| ೧. ಹಕ್ಕಿಯ ಕಲರವ | ಅ) ಬೆಳಗುವ ರವಿಯಲ್ಲಿ | ____________ |
| ೨. ಜ್ವಾಲೆಯ ಕಾವು | ಆ) ಸಾವಿನ ಬಯಲಲ್ಲಿ | ____________ |
| ೩. ಮಂಜಿನ ಹೊದಿಕೆ | ಇ) ನೀಲಿಯ ಬಾನಲ್ಲಿ | ____________ |
| ೪. ರತ್ನದ ಗಣಿ | ಈ) ಸಂಜೆಯ ರಂಗಲ್ಲಿ | ____________ |
| ೫. ಬೆಂಕಿಯೇ ಉರಿದಿದೆ | ಉ) ಸಾಗರನೆದೆಯಲ್ಲಿ | ____________ |
| ೬. ಹುಟ್ಟಿನ ಬಯಕೆ | ಊ) ಶಿಖರದ ತುದಿಯಲ್ಲಿ | ____________ |
| | ಋ) ಪರ್ವತದೊಡಲಲ್ಲಿ | |

## ಭಾಷಾಭ್ಯಾಸ

ಅ) ಕೆಳಗಿನ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ.

ಸೋಜಿಗ, ಭುವನ, ಜ್ವಾಲೆ, ಹೊದಿಕೆ, ಬಯಕೆ.

______________________________

______________________________

______________________________

ಆ) 'ಒಂದು ಸೋಜಿಗ'ಪದ್ಯದಲ್ಲಿ ಬಂದಿರುವ ಪ್ರಾಸಪದಗಳನ್ನು ಪಟ್ಟಿಮಾಡಿರಿ.

______________________________

______________________________

______________________________



## ಭಾಷಾ ಚಟುವಟಿಕೆ

### ಭಾಗ 'ಅ'

ಅ) ಮಾದರಿಯಂತೆ ಕೊಟ್ಟಿರುವ ಅಕ್ಷರಗಳಿಂದ ಹೊಸಪದ ರಚಿಸಿರಿ.

ಮಾದರಿ : ಕಾರು




೧. ________ ೨. ________ ೩. ________
೪. ________ ೫. ________ ೬. ________
೭. ________ ೮. ________ ೯. ________
೧೦. ________ ೧೧. ________ ೧೨. ________

## ಆ) ಮಾದರಿಯಂತೆ ಬರೆಯಿರಿ.

| ಮಾದರಿ : | ಕೇಳು | – | ಕೇಳಿದ | – | ಕೇಳಿದನು |
|---|---|---|---|---|---|
| | ನೋಡು | – | ________ | – | ________ |
| | ಬರೆ | – | ________ | – | ________ |
| | ಓದು | – | ________ | – | ________ |
| | ಹಾಡು | – | ________ | – | ________ |

## ಇ) ಮಾದರಿಯಂತೆ ಕೊಟ್ಟಿರುವ ಪದಗಳಿಂದ ಹೊಸ ಪದಗಳನ್ನು ರಚಿಸಿರಿ.

**ಮಾದರಿ :** ಶಿಖರ = ಶಿರ, ಶಿಖ.

೧. ನೇಸರ = ________ ________

೨. ನಗರ = ________ ________

೩. ಅಂತರಂಗ = ________ ________

೪. ಸಂಗೀತ = ________ ________



## ಭಾಗ 'ಆ'

## ಅ) ಈ ಪದ್ಯವನ್ನು ಕಂಠಪಾಠ ಮಾಡಿ ರಾಗಬದ್ಧವಾಗಿ ಹಾಡಿರಿ.

## ಆ) ಈ ಪದ್ಯದಲ್ಲಿ ಬರುವ ನಿಸರ್ಗದ ವಿಶೇಷತೆಯನ್ನು ಪಟ್ಟಿ ಮಾಡಿ.

________________________________________

________________________________________

## ಇ) ಕೆಳಗೆ ಕೊಟ್ಟಿರುವ ಪದಗಳನ್ನು ತಪ್ಪಾಗದಂತೆ ಸರಸರನೆ ಹಲವು ಬಾರಿ ಹೇಳಿರಿ.

೧. ಲಾರಿ ರೈಲು ; ರೈಲು ಲಾರಿ.

೨. ಕಪ್ಪು ಕುಂಕುಮ ; ಕೆಂಪು ಕುಂಕುಮ.

೩. ಬಿಳಿ ಹಲ್ಲು ; ಹುಳುಕು ಹಲ್ಲು.

೪. ಕರ್‍ರನೆ ಕಾಗೆಯೊಂದು ಸರ್‍ರನೆ ಮೇಲೆ ಏರಿ, ಪುರ್‍ರೆಂದು ಹಾರಿಹೋಯಿತು.

೫. ಅಪ್ಪ ಸೊಪ್ಪು ತಿಂದು ಗಪ್ಪು ಕೂತ.

# ೧೨. ಗುರು ಕಲಿಸಿದ ಪಾಠ




– ಕಮಲಾ ರಾಮಸ್ವಾಮಿ

**ಪ್ರವೇಶ :**

ತುಂಟತನ ಕುಚೋದ್ಯಕ್ಕೆ ದಾರಿಮಾಡಿಕೊಡುತ್ತದೆ. ಅನ್ಯರನ್ನು ಕಷ್ಟಕ್ಕೆ ಗುರಿಮಾಡಿ ಸಂತೋಷ ಪಡಲು ಬಯಸುತ್ತದೆ. ಇಂತಹ ಅವಿವೇಕದ ನಡವಳಿಕೆ ಅನ್ಯರಿಗೆ ತೊಡಕಾಗುತ್ತದೆ. ಬಡವರನ್ನು, ಅಶಕ್ತರನ್ನು, ಶ್ರಮಿಕರನ್ನು ಸಂಕಷ್ಟಕ್ಕೆ ತಳ್ಳುತ್ತದೆ. ಇದು ಮಾನವೀಯ ಲಕ್ಷಣವಲ್ಲ. ನಯವಿನಯದ ಮಾತುಗಳಿಂದ ಎಂತಹ ತುಂಟರನ್ನೂ ದಾರಿಗೆ ತರಬಹುದು. ಮೃದು ನುಡಿಗಳಿಂದ ಸತ್ಯದರ್ಶನವನ್ನೇ ಮಾಡಿಸಬಹುದು. ಅನ್ಯರಿಗೆ ನೋವುಂಟುಮಾಡಿ ಆನಂದಿಸುವುದಕ್ಕಿಂತಲೂ, ಅವರ ದುಃಖ ದುಮ್ಮಾನಗಳನ್ನು, ಕಷ್ಟ ಕಾರ್ಪಣ್ಯಗಳನ್ನು ದೂರಮಾಡಲು ನೆರವಾಗುವುದರಿಂದ ಪಡೆಯುವ ಸಂತಸ ಅಮಿತವಾದುದು. ಒಳ್ಳೆಯ ಮಾತುಗಳಿಂದ ಯಾವ ಕಾರ್ಯವನ್ನಾದರೂ ಸಾಧಿಸಬಹುದು. ನಮಗೆ ಆಗುವ ಸಂತೋಷಕ್ಕಿಂತ, ನಾವು ಇನ್ನೊಬ್ಬರಿಗೆ ಕೊಡುವ ಸಂತೋಷ ನಮಗೆ ಇನ್ನೂ ಹರ್ಷವನ್ನು ತರುತ್ತದೆ.



ಒಂದು ಊರಿನಲ್ಲಿ ಒಬ್ಬ ಸಾಹುಕಾರನಿದ್ದನು. ಅವನಿಗೆ ಒಬ್ಬನೇ ಮಗ; ಹುಡುಗ ಬುದ್ಧಿವಂತ. ಒಳ್ಳೆಯವನು ಕೂಡ. ಆದರೆ ತುಂಟ. ಹುಡುಗಾಟ ಜಾಸ್ತಿ. ಅವನ ತುಂಟತನ ಬಿಡಿಸಿ, ಒಳ್ಳೆಯ ವಿದ್ಯಾ ಬುದ್ಧಿ ಕಲಿಸುವ ಗುರುವಿಗಾಗಿ ಸಾಹುಕಾರ ಹುಡುಕುತ್ತಿದ್ದನು. ಆ ಊರಿನಲ್ಲಿದ್ದ ಸಂಸ್ಕೃತ ಉಪಾಧ್ಯಾಯರು ಬಹಳ ಗುಣಾಢ್ಯರು. ವಿವೇಕಿ ಹಾಗೂ ಸಹನೆಯ ಮನುಷ್ಯ. ಎಂತಹವರನ್ನಾದರೂ

ದಾರಿಗೆ ತರುತ್ತಾರೆ ಎಂದು ಯಾರೋ ತಿಳಿಸಿದರು. ಸಾಹುಕಾರ ಅವರನ್ನು ತನ್ನ ಮಗನ ಗುರುವಾಗಲು ಬೇಡಿ ಒಪ್ಪಿಸಿದನು. ದಿನವೂ ಸಂಜೆ ತಿರುಗಾಡಲು ಹೋದಾಗ, ಕಥೆ, ಹರಟೆ ಹಾಗೂ ವಿಚಾರ ಮಾಡುವ ಮೂಲಕ ಶಿಷ್ಯನಲ್ಲಿ ತಿಳಿವಳಿಕೆ ತುಂಬಲು ಗುರುಗಳು ಪ್ರಯತ್ನಿಸುತ್ತಿದ್ದರು.

ಹೀಗೆ ಒಂದು ದಿನ ಸಂಜೆ ಗುರು-ಶಿಷ್ಯರು ಹೊಲವೊಂದರ ಬಳಿ ನಡೆದು ಹೋಗುತ್ತಿದ್ದಾಗ. ಅಲ್ಲಿ ಒಂದು ಜೊತೆ ಹಳೇ ಬೂಟು, ಒಂದು ಹರಕು ಕೋಟು ಇಟ್ಟಿದ್ದು ಕಂಡಿತು. ಹೊಲದಲ್ಲಿ ಬಡ ರೈತನೊಬ್ಬ ಕೆಲಸ ಮಾಡುತ್ತಿದ್ದನು. ತುಂಟ ಹುಡುಗನಿಗೆ ತಕ್ಷಣ ಕುಚೋದ್ಯ ಮಾಡಬೇಕೆನಿಸಿತು. "ಗುರುಗಳೇ ಈ ಪಾದರಕ್ಷೆಯನ್ನು ಬಚ್ಚಿಟ್ಟುಬಿಡೋಣ; ಆ ರೈತ ಬಂದು ಏನು ಮಾಡುತ್ತಾನೋ ಎಂಬುದನ್ನೂ ಮರೆಯಲ್ಲಿ ನಿಂತು ನೋಡೋಣ; ತಮಾಷೆಯಾಗಿರುತ್ತೆ" ಎಂದನು. ಗುರು ಹುಡುಗನಿಗೆ "ಮಗು, ಯಾವಾಗಲೂ ನಮ್ಮ ತಮಾಷೆಗೆ ಇನ್ನೊಬ್ಬರನ್ನು ಹಿಂಸಿಸಬಾರದು. ಅದರಲ್ಲೂ ಬಡತನದಿಂದ ಬಳಲುತ್ತಾ ಇರುವವರನ್ನು ಯಾವತ್ತೂ ನೋಯಿಸಬಾರದು. ನೀನು ಐಶ್ವರ್ಯವಂತನಾದ್ದರಿಂದ ಆ ಬಡವನಿಗೆ ಇನ್ನಷ್ಟು ಹೆಚ್ಚಿನ ಸಂತೋಷ ಕೊಡವಂತಹ ಕೆಲಸ ಮಾಡು. ನೀನೂ ಆನಂದ ಪಡೆಯಬಹುದು. ಅವನ ಎರಡು ಬೂಟುಗಳಲ್ಲೂ, ಒಂದೊಂದು ಬೆಳ್ಳಿ ರೂಪಾಯಿ ಇಡು. ಮರೆಯಲ್ಲಿ ನಿಂತು ಆತ ಏನು ಮಾಡುತ್ತಾನೆಂದು ನೋಡುವಾ!" ಎಂದರು. ಹುಡುಗ ಅದರಂತೆ ಒಂದೊಂದು ನಾಣ್ಯ ಇಟ್ಟು ಮರೆಯಲ್ಲಿ ಅಡಗಿ ನಿಂತನು.

ದಣಿದ ರೈತ ಹಿಂದಿರುಗಿ ತೊರೆಯಲ್ಲಿ ಕಾಲು ತೊಳೆದುಕೊಂಡು ಬಂದನು. ಹಳೆಯ ಕೋಟನ್ನು ಝಾಡಿಸಿ ಹಾಕಿಕೊಂಡ ಅನಂತರ ಬೂಟಿನಲ್ಲಿ ಕಾಲಿಟ್ಟನು, ಏನೋ ಒತ್ತಿದಂತಾಗಿ ಕಾಲು ತೆಗೆದು ಬೂಟನ್ನು ಕೊಡವಿದನು. ನಾಣ್ಯ ಬಿತ್ತು. ಅಚ್ಚರಿಯಿಂದ ಆಚೀಚೆ ನೋಡಿದನು, ಯಾರೂ ಕಾಣಿಸಲಿಲ್ಲ. ನಾಣ್ಯವನ್ನು ಕಣ್ಣಿಗೆ ಒತ್ತಿಕೊಂಡು ಜೇಬಿಗೆ ಹಾಕಿಕೊಂಡನು. ಇನ್ನೊಂದು ಬೂಟನ್ನು ಹಾಕಿಕೊಂಡಾಗಲೂ ಅದೇ ಅನುಭವ. ರೈತ ತಕ್ಷಣ ಮೊಳಕಾಲೂರಿ, ಆಕಾಶಕ್ಕೆ ಮುಖ ಮಾಡಿ, ಕೈ ಜೋಡಿಸಿ, "ಹೇ ದಯಾಮಯೀ! ತಂದೆ! ಈ ದಿನ ನೀನು ನನ್ನ ಕಾಪಾಡಿದೆ. ಬಹಳ ಕೆಲಸ ಮಾಡಿ ನಿಶ್ಶಕ್ತಿಯಿಂದ ನರಳುತ್ತಿದ್ದ ಹೆಂಡತಿಗೆ, ಜ್ವರ ಬಂದ ಮಗುವಿಗೆ ಔಷಧಿಗೆ ನೀನೇ ಹಣ ಒದಗಿಸಿದೆಯಾ ದೇವಾ! ನಿನ್ನನ್ನು ನಂಬಿದವರಿಗೆ ಎಂದೂ ಮೋಸವಿಲ್ಲ" ಎಂದು ಕಣ್ಣೀರು ಸುರಿಸುತ್ತಾ ಎದ್ದು ಮನೆಗೆ ಹೊರಟನು.

ಹುಡುಗನಿಗೆ ರೈತನ ಕಥೆ ಕೇಳಿ ಬಹಳ ಸಂಕಟವಾಯಿತು. ಕಣ್ಣಲ್ಲಿ ನೀರು ಬಂತು. "ನೋಡಿದೆಯಾ ಮಗು! ಕಾಲಿನ ಬೂಟನ್ನು ಬಚ್ಚಿಡುವ ಬದಲು ಆ ನಾಣ್ಯ ದಾನ ಮಾಡಿದಾಗ ಆದ ಪರಿಣಾಮ, ತುಂಟಾಟದ, ಕುಚೋದ್ಯದ ಆನಂದಕ್ಕಿಂತ ಈ ಸಂತೋಷ ಹೆಚ್ಚಲ್ಲವೆ?" ಎಂದು ಗುರುಗಳು ಕೇಳಿದರು.

ಹುಡುಗನು ಗುರುಗಳಿಗೆ ನಮಸ್ಕರಿಸಿ; "ನಿಮ್ಮಿಂದ ನಾನು ಮರೆಯಲಾಗದ ಪಾಠವನ್ನು ಕಲಿತೆ. ನಮಗೆ ಆಗುವ ಸಂತೋಷಕ್ಕಿಂತ, ನಾವು ಇನ್ನೊಬ್ಬರಿಗೆ ಕೊಡುವ ಸಂತೋಷ ನಮಗೆ ಇನ್ನೂ ಹರ್ಷವನ್ನು ತರುತ್ತದೆ" ಎಂಬ ಮಾತಿನ ಅರ್ಥ ಈಗ ಅನುಭವವಾಯಿತು.

**ಕೃತಿಕಾರರ ಪರಿಚಯ:**



ಕೊರವಂಜಿ ಹಾಸ್ಯ ಪತ್ರಿಕೆ ಮೂಲಕ ಕನ್ನಡಿಗರ ಮನೆಮಾತಾಗಿರುವ ಡಾ। ಎಂ ಶಿವರಾಮ್(ರಾಶಿ) ಅವರ ಪುತ್ರಿ ಕಮಲಾ ರಾಮಸ್ವಾಮಿ ಅವರು ೧೬.೦೬.೧೯೩೫ರಲ್ಲಿ ಹಾಸನದಲ್ಲಿ ಹುಟ್ಟಿದರು. ಇವರು 'ಮಾತೃದೇವೋ ಭವ', 'ಅಂಚೆ ಸೇವೆ', 'ರೈಲುಗಾಡಿ', 'ಸ್ವ ಉದ್ಯೋಗ', 'ಸೂರ್ಯಗ್ರಹಣ ಹೇಗಾಯಿತು', ಮಹಾಭಾರತದ ಕತೆಗಳು', 'ಗುಲಾಬಿ ರಿಬ್ಬನ್', 'ಗುರು ಕಲಿಸಿದ ಪಾಠ', 'ಅನಾಯಾಸದ ಅಡುಗೆಗಳು' ಮುಂತಾದ ೩೦ಕ್ಕೂ ಹೆಚ್ಚು ಕೃತಿಗಳನ್ನು ಬರೆದಿದ್ದಾರೆ.

| | | |
|---|---|---|
| **ಕ್ಷೇತ್ರ** | : | ಮಾತನಾಡುವುದು. |
| **ಸಾಮರ್ಥ್ಯ** | : | ವಿನಯ ಮತ್ತು ವಿವೇಕಪೂರ್ವಕವಾಗಿ ಮಾತನಾಡುವುದು. |



## ಪದಗಳ ಅರ್ಥ :

ಅಡಗು–ಬಚ್ಚಿಟ್ಟುಕೊಂಡು, ಅವಿತುಕೊಳ್ಳು, ಮರೆಯಾಗು;
ಅಚ್ಚರಿ–ಆಶ್ಚರ್ಯ, ಬೆರಗು;
ಕುಚೋದ್ಯ–ಕಿಡಿಗೇಡಿತನ, ಚೇಷ್ಟೆ, ಚಾಡಿ ಹೇಳುವಿಕೆ, ದೂಷಿಸುವಿಕೆ, ಕೆಟ್ಟಯೋಚನೆ;
ಗುಣಾಢ್ಯರು–ಗುಣವಂತ;
ಝಾಡಿಸು–ಕೊಡವು;
ತೊರೆ–ಚಿಕ್ಕನದಿ, ಹೊಳೆ;
ದಣಿದ–ಆಯಾಸಗೊಂಡ, ಬಳಲಿದ;
ನಿಶ್ಶಕ್ತಿ–ಶಕ್ತಿ ಇಲ್ಲದೆ ಇರುವುದು, ಶಕ್ತಿಹೀನತೆ, ದುರ್ಬಲತೆ;
ಪಾದರಕ್ಷೆ–ಪಾದಕ್ಕೆ ರಕ್ಷಣೆ ನೀಡುವ ಚಪ್ಪಲಿ ಅಥವಾ ಬೂಟು;
ಸಾಹುಕಾರ–ಶ್ರೀಮಂತ;
ಹರಟೆ–ಸರಸಸಲ್ಲಾಪ, ವಿನೋದದ ಮಾತುಕತೆ.

## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಸಾಹುಕಾರನು ಗುರುವನ್ನು ಹುಡುಕಲು ಕಾರಣವೇನು?

________________________________

೨. ಗುರುಗಳು ಶಿಷ್ಯನಲ್ಲಿ ತಿಳಿವಳಿಕೆ ತುಂಬಲು ಹೇಗೆ ಪ್ರಯತ್ನಿಸಿದರು?

________________________________

೩. ಗುರು-ಶಿಷ್ಯರು ಹೊಲವೊಂದರ ಬಳಿ ನಡೆದು ಹೋಗುತ್ತಿದ್ದಾಗ ಅಲ್ಲಿ ಕಂಡಿದ್ದು ಏನು?

________________________________________

೪. ರೈತನು ಬೂಟನ್ನು ಕಾಲಿನಿಂದ ತೆಗೆದು ಕೊಡವಿದ್ದೇಕೆ?

________________________________________

೫ ರೈತನಿಗೆ ಹಣದ ಆವಶ್ಯಕತೆ ಏಕೆ ಇದ್ದಿತು?

________________________________________

## ಆ) ಸೂಕ್ತವಾದ ಪದಗಳಿಂದ ಬಿಟ್ಟ ಸ್ಥಳಗಳನ್ನು ತುಂಬಿರಿ.

೧. ಸಾಹುಕಾರನ ಊರಿನಲ್ಲಿ ಬಹಳ ಗುಣಾಢ್ಯರಾಗಿದ್ದವರೆಂದರೆ________________

೨. ತುಂಟ ಹುಡುಗನಲ್ಲಿ ತಿಳಿವಳಿಕೆ ತುಂಬಲು ಪ್ರಯತ್ನಿಸಿದವರು________________

೩. ಹುಡುಗನಿಗೆ ಎರಡು ಬೂಟುಗಳಲ್ಲೂ ________________ ಇಡುವಂತೆ ಗುರುಗಳು ತಿಳಿಸಿದರು.

೪. ಹುಡುಗನಿಗೆ ರೈತನ ಕಥೆ ಕೇಳಿ ________________ ಆಯಿತು.

## ಇ) ಮಾದರಿಯಂತೆ ವಾಕ್ಯಗಳನ್ನು ಸರಿಪಡಿಸಿ ಬರೆಯಿರಿ.

**ಮಾದರಿ :** ಸಾಹುಕಾರ ವಿದ್ಯಾ ಬುದ್ಧಿ ಹುಡುಕುತ್ತಿದ್ದನು ಗುರುವಿಗಾಗಿ ಒಳ್ಳೆಯ ಕಲಿಸುವ

ಒಳ್ಳೆಯ ವಿದ್ಯಾ ಬುದ್ಧಿ ಕಲಿಸುವ ಗುರುವಿಗಾಗಿ ಸಾಹುಕಾರ ಹುಡುಕುತ್ತಿದ್ದನು.

೧. ಉಪಾಧ್ಯಾಯರು ಆ ಸಂಸ್ಕೃತ ಬಹಳ ಊರಿನಲ್ಲಿದ್ದ ಗುಣಾಢ್ಯರು.

________________________________________

೨. ತಿಳಿವಳಿಕೆ ಗುರುಗಳು ತುಂಬಲು ಶಿಷ್ಯನಲ್ಲಿ ಪ್ರಯತ್ನಿಸುತ್ತಿದ್ದರು.

________________________________________

೩. ಹಳೇ ಕೋಟು ಜೊತೆ ಒಂದು ಬೂಟು, ಒಂದು ಇಟ್ಟಿದ್ದು ಹರಕು ಕಂಡಿತು.

________________________________________

೪. ದೇವಾ ಬಂದ ಹಣ ಜ್ವರ ಮಗುವಿಗೆ ನೀನೇ ಒದಗಿಸಿದೆಯಾ ಔಷಧಿಗೆ!

________________________________________

೫. ಸಂತೋಷ ಈ ತುಂಟಾಟದ, ಆನಂದಕ್ಕಿಂತ ಕುಚೋದ್ಯದ ಹೆಚ್ಚಲ್ಲವೆ?

________________________________________

## ಈ) ಈ ಮಾತುಗಳನ್ನು ಯಾರು ಯಾರಿಗೆ ಹೇಳಿದರು.

೧. "ಈ ಪಾದರಕ್ಷೆಯನ್ನು ಬಚ್ಚಿಟ್ಟುಬಿಡೋಣ."

ಯಾರು ಹೇಳಿದರು? ________________________

ಯಾರಿಗೆ ಹೇಳಿದರು? ________________________

೨. "ನಮ್ಮ ತಮಾಷೆಗೆ ಇನ್ನೊಬ್ಬರನ್ನು ಹಿಂಸಿಸಬಾರದು."

ಯಾರು ಹೇಳಿದರು? ________________________

ಯಾರಿಗೆ ಹೇಳಿದರು? ________________________

೩. "ಮರೆಯಲ್ಲಿ ನಿಂತು ಆತ ಏನು ಮಾಡುತ್ತಾನೆಂದು ನೋಡುವಾ!"

ಯಾರು ಹೇಳಿದರು? ________________________

ಯಾರಿಗೆ ಹೇಳಿದರು? ________________________

೪. "ನಿನ್ನನ್ನು ನಂಬಿದವರಿಗೆ ಎಂದೂ ಮೋಸವಿಲ್ಲ."

ಯಾರು ಹೇಳಿದರು? ________________________

ಯಾರಿಗೆ ಹೇಳಿದರು? ________________________

೫. "ಇನ್ನೊಬ್ಬರಿಗೆ ಕೊಡುವ ಸಂತೋಷ ನಮಗೆ ಇನ್ನೂ ಹರ್ಷವನ್ನು ತರುತ್ತದೆ."

ಯಾರು ಹೇಳಿದರು? ________________________

ಯಾರಿಗೆ ಹೇಳಿದರು? ________________________

## ಉ) ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಸಾಹುಕಾರನು ತನ್ನ ಮಗನಿಗೆ ಗುರುವಾಗುವಂತೆ ಸಂಸ್ಕೃತ ಉಪಾಧ್ಯಾಯರನ್ನು ಬೇಡಲು ಕಾರಣವೇನು?

________________________________________

________________________________________

________________________________________

೨. ರೈತ ಮೊಳಕಾಲೂರಿ, ಆಕಾಶಕ್ಕೆ ಮುಖ ಮಾಡಿ ದೇವರಿಗೆ ಏನೆಂದು ಕೃತಜ್ಞತೆ ಸಲ್ಲಿಸಿದನು?

________________________________________

________________________________________

________________________________________

೩. ತುಂಟ ಹುಡುಗನಿಗೆ ಏಕೆ ಸಂಕಟವಾಯಿತು?

________________________________________

________________________________________

________________________________________

೪. ತುಂಟ ಹುಡುಗನು ಗುರುಗಳಿಂದ ಕಲಿತ ಮರೆಯಲಾಗದ ಪಾಠ ಯಾವುದು?

________________________________________

________________________________________

________________________________________

೫. ಗುರುಗಳ ಯಾವ ಗುಣವನ್ನು ನೀವು ಮೆಚ್ಚುವಿರಿ?

________________________________________

________________________________________

________________________________________

## ಭಾಷಾಭ್ಯಾಸ

**ಗೌರವ ಸೂಚಕ ಪದಗಳನ್ನು ಗಮನಿಸಿರಿ. ಧ್ವನಿಯ ಏರಿಳಿತದಿಂದ ಓದಿರಿ.**

- ನಮಸ್ಕಾರ... ಒಳಗೆ ಬನ್ನಿ ಗುರುಗಳೇ.
- ಗುರುಗಳೇ, ದಯವಿಟ್ಟು ತಂಪಾದ ಪಾನೀಯ ಸ್ವೀಕರಿಸಿರಿ.
- ಮಾನ್ಯರೇ! ತಮ್ಮ ಆಗಮನದಿಂದ ಸಂತೋಷವಾಯಿತು.
- ಪೂಜ್ಯ ಸ್ವಾಮೀಜಿಯ ಆಶೀರ್ವಾದ ನಮ್ಮ ಮೇಲಿರಲಿ.
- ತಾವು ನನ್ನನ್ನು ಪ್ರೋತ್ಸಾಹಿಸಿದ್ದಕ್ಕೆ ಧನ್ಯವಾದಗಳು.
- ಆದರಣೀಯರೇ. . .ತಾವು ಆಗಮಿಸಿದ್ದಕ್ಕೆ ತುಂಬಾ ಖುಷಿಯಾಗಿದೆ.
- ಸನ್ಮಾನ್ಯರ ಅನುದಾನದ ಸಹಕಾರಕ್ಕೆ ನಾವು ಚಿರಋಣಿಯಾಗಿದ್ದೇವೆ.

## ಭಾಷಾ ಚಟುವಟಿಕೆ

### ಭಾಗ 'ಅ'

**ಅ. ಸಮಾನಾರ್ಥಕ ಪದ ಬಳಸಿ ಪದಬಂಧ ಪೂರ್ಣಗೊಳಿಸಿರಿ.**

| | | | | |
|---|---|---|---|---|
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |
| | | ನ | | |

**ಸಮಾನಾರ್ಥಕ ಪದಗಳು**

೧. ತಂದೆ
೨. ಹೊಸ
೩. ಯುದ್ಧ
೪. ಬಂಗಾರ
೫. ಮುಖ
೬. ಮಯೂರಿ
೭. ಕಣ್ಣು
೮. ಗಣಪ
೯. ಪಟ್ಟಣ
೧೦. ಗಾಳಿ

### ಭಾಗ 'ಆ'

- ನಿಮ್ಮ ಮನಸ್ಸಂತೋಷಕ್ಕಾಗಿ ನೀವು ಮಾಡುವ ಕೆಲಸಗಳಾವುವು?
- ತುಂಟ ಹುಡುಗರ ಸಹವಾಸದಿಂದ ದೂರವಿರಬೇಕೆಂದು ನಿಮಗೆ ಅನಿಸಲು ಕಾರಣವೇನು?
- ದೀನ ದಲಿತರ ಸೇವೆಯೇ ಭಗವಂತನ ಸೇವೆ ಈ ಮಾತಿನ ಅರ್ಥವೇನು?

# ೧೩. ರಜಾಕಾಲ



– ಪಿ. ನಾರಾಯಣ ಭಟ್

**ಪ್ರವೇಶ :**

ಬೇಸಿಗೆ ರಜೆ ಎಂದರೆ ಮಕ್ಕಳಿಗೆ ಎಲ್ಲಿಲ್ಲದ ಸಂತೋಷ. ಇಂದಿನ ಆಧುನಿಕ ಯುಗದಲ್ಲಿ ಯಾಂತ್ರಿಕ ಬದುಕಿನಲ್ಲಿ ಮಕ್ಕಳ ಮನಸ್ಸು ಸಂತೋಷದಿಂದ, ಸ್ವಚ್ಛಂದವಾಗಿರಲು ಬಯಸುತ್ತದೆ. ನಾಲ್ಕು ಗೋಡೆಗಳ ಮಧ್ಯೆ ಕಲಿಯಲಾರದ್ದನ್ನು ಪ್ರಕೃತಿಯ ಮಡಿಲಲ್ಲಿ ಕಲಿಯುತ್ತಾರೆ. ರಜೆಯಲ್ಲಿ ಊರಿಗೆ, ಪ್ರವಾಸಕ್ಕೆ ಹೋಗಿ ಆಟವಾಡುತ್ತಾ, ಕೆರೆಕೊಳಗಳಲ್ಲಿ ಈಜುತ್ತಾ, ಬಂಧು ಬಾಂಧವರೊಡನೆ ನಲಿಯುತ್ತಾ, ಅಜ್ಜ–ಅಜ್ಜಿಯರಿಂದ ಕಥೆಗಳನ್ನು ಆಲಿಸುತ್ತಾ ಕಳೆಯುವ ಸುಂದರ ಕ್ಷಣಗಳು ಸ್ಮರಣೀಯವಾಗಿರುತ್ತವೆ.





ವರ್ಷದ ಕೊನೆಯ ಪರೀಕ್ಷೆಯು ಮುಗಿಯಲು
ನಡೆವುದು ನಮ್ಮ ತಯಾರಿ
ದೂರದ ಹಳ್ಳಿಯ ಅಜ್ಜನ ಮನೆಗೆ
ಮಾರನೇ ದಿನವೇ ಸವಾರಿ ॥೧॥



ಬೇರೆಡೆಯಿಂದಲು ಬಂಧುಗಳೆಲ್ಲರು
ಬರುವರು ಮಕ್ಕಳ ಸಹಿತ
ಕುಣಿಯುವ ಮರಿ ಕಪಿಸೇನೆಯ ಮೇಲೆ
ಯಾರಿಗು ಸಿಕ್ಕದು ಹಿಡಿತ ॥೨॥

ಬೆಳಗಾದೊಡನೆಯೆ ತಿಂಡಿಯ ಮುಗಿಸಿ
ನದಿ ಕಡೆ ಸಾಗುತ ಈಜುವೆವು
ಸಂಜೆಯ ಸಮಯದ ವಿಶಾಲ ಬಯಲಲಿ
ಆಟವನಾಡುತ ಕಳೆಯುವೆವು ॥೩॥

ರಾತ್ರಿಯ ವೇಳೆಗೆ ಊಟದ ನಂತರ
ಅಜ್ಜನ ಸುತ್ತಲು ಸೇರುವೆವು
ರಾಜನ, ರಾಣಿಯ, ದೇವತೆಗಳ ಕತೆ
ಮುಗಿಯುವವರೆಗೂ ಕೂರುವೆವು ॥೪॥

ಕತೆಗಳ ರಾಜಕುಮಾರರ ಹಾಗೆ
ಇರುವೆವು ಅಜ್ಜನ ಮನೆಯಲ್ಲಿ
ರಜೆಯದು ಮುಗಿದು, ಹೊರಡುವ ಹೊತ್ತು
ಕಂಬನಿ ಹರಿವುದು ಕ್ಷಣದಲ್ಲಿ ॥೫॥

*ಕಲಿಕೆಯ ಪರಿಸರದ ಬದಲಾವಣೆಯೆ, ಸಮಯದ ಸದುಪಯೋಗ.*

**ಕೃತಿಕಾರರ ಪರಿಚಯ:**



ಪಿ. ನಾರಾಯಣ ಭಟ್ ಅವರು ಕೊಡಗು ಜಿಲ್ಲೆಯ ಪೆರಾಜೆ ಗ್ರಾಮದವರು. ಶಿವಮೊಗ್ಗದಲ್ಲಿ ದಂತ ವೈದ್ಯಕೀಯ ವೃತ್ತಿಯಲ್ಲಿದ್ದು, ಈಗ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. 'ಚಿಲಿಪಿಲಿಗುಟ್ಟುವ ಚಿಣ್ಣರಿಗೆ', 'ಪುಟಾಣಿ ಪದ್ಯಗಳು', 'ಚಿನ್ನದ ಚೆಂಡು', 'ಬಣ್ಣದ ಬಲೂನು' – ಇವು ಮಕ್ಕಳಿಗಾಗಿ ಬರೆದ ಕವನ ಸಂಕಲನಗಳು. 'ಭಾರತಿಗೆ ಆರತಿ' ಎಂಬ ದೇಶಭಕ್ತಿ ಗೀತೆಗಳ ಪುಸ್ತಕವನ್ನು ರಚಿಸಿದ್ದಾರೆ. ಇವರ 'ಪುಟಾಣಿ ಪದ್ಯಗಳು' ಕವನ ಸಂಕಲನದಿಂದ ಪ್ರಸ್ತುತ ಪದ್ಯವನ್ನು ಆರಿಸಲಾಗಿದೆ.

| | | |
|---|---|---|
| **ಕ್ಷೇತ್ರ** | : | ಬರೆಯುವುದು. |
| **ಸಾಮರ್ಥ್ಯ** | : | ಸರಳವಾಗಿ, ಸ್ಪಷ್ಟವಾಗಿ, ಸರಿಯಾದ ಕ್ರಮದಲ್ಲಿ ಬರೆಯುವುದು ಮತ್ತು ಓದುವುದು. |



## ಪದಗಳ ಅರ್ಥ :

ಕಂಬನಿ – ಕಣ್ಣೀರು;

ಕಪಿಸೇನೆ – ಕೋತಿಗಳ ಗುಂಪು;

ತಯಾರಿ – ಸಿದ್ಧತೆ;

ಬಂಧುಗಳು – ನೆಂಟರು, ಸಂಬಂಧಿಗಳು;

ಹಿಡಿತ – ಹತೋಟಿ, ಅಂಕೆ, ಪಟ್ಟು;

ಸವಾರಿ – ಪ್ರಯಾಣ.

## ಅಭ್ಯಾಸ

### ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಮಕ್ಕಳು ರಜೆ ಬಂದಾಗ ಎಲ್ಲಿಗೆ ಹೋಗುವರು ಎಂದು ಕವಿ ಹೇಳಿದ್ದಾರೆ?

______________________________

೨. ರಜಾಕಾಲ ಪದ್ಯದಲ್ಲಿ ಮಕ್ಕಳ ಗುಂಪನ್ನು ಯಾವುದಕ್ಕೆ ಹೋಲಿಸಲಾಗಿದೆ?

________________________________________

೩. ಅಜ್ಜನು ಹೇಳುವ ಕಥೆಗಳು ಯಾವುವೆಂದು ಪಿ. ನಾರಾಯಣ ಭಟ್ ಅವರು ಹೇಳಿದ್ದಾರೆ?

________________________________________

೪. ಅಜ್ಜನ ಮನೆಯಲ್ಲಿ ಮಕ್ಕಳು ಯಾರ ಹಾಗೆ ಇರುವರೆಂದು ರಜಾಕಾಲ ಪದ್ಯದಲ್ಲಿ ಹೇಳಿದೆ?

________________________________________

೫. ಮಕ್ಕಳ ಕಣ್ಣಲ್ಲಿ ಯಾವಾಗ ಕಂಬನಿ ಬರುವುದೆಂದು ಕವಿ ಹೇಳಿದ್ದಾರೆ?

________________________________________

## ಆ) ಕೆಳಗಿನ ಪ್ರಾಸಪದಗಳನ್ನು ಹೊಂದಿಸಿ ಬರೆಯಿರಿ.

| ಅ | ಬ | ಉತ್ತರಗಳು |
|---|---|---|
| ೧. ತಯಾರಿ | ಅ) ಕೂರುವೆವು | ________ |
| ೨. ಸಹಿತ | ಆ) ಮನೆಯಲ್ಲಿ | ________ |
| ೩. ಸೇರುವೆವು | ಇ) ಸವಾರಿ | ________ |
| ೪. ಕ್ಷಣದಲ್ಲಿ | ಈ) ಹೊತ್ತು | ________ |
| | ಉ) ಹಿಡಿತ | |

## ಇ) ಕೆಳಗಿನ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಅಜ್ಜನ ಮನೆಯಲ್ಲಿ ಮಕ್ಕಳ ಚಟುವಟಿಕೆಗಳೇನು? 'ರಜಾಕಾಲ' ಪದ್ಯದಲ್ಲಿ ಹೇಳಿರುವಂತೆ ವಿವರಿಸಿರಿ?

________________________________________

________________________________________

________________________________________

೨. ಅಜ್ಜನೊಂದಿಗೆ ಮಕ್ಕಳು ಹೇಗೆ ಸಮಯ ಕಳೆಯುವರೆಂದು ನಾರಾಯಣ ಭಟ್ಟರು ಹೇಳಿದ್ದಾರೆ?

______________________________

______________________________

______________________________

೩. ಮಕ್ಕಳಿಗೆ ಬೇಸಿಗೆ ರಜೆ ಮುಗಿದು ಊರಿಗೆ ಹೊರಡುವಾಗ ಕಂಬನಿ ಹರಿಯುವುದು ಏಕೆ?

______________________________

______________________________

______________________________

೪. ಬೇಸಿಗೆ ರಜದ ನಿಮ್ಮ ಅನುಭವಗಳನ್ನು ಬರೆಯಿರಿ.

______________________________

______________________________

______________________________

## ಭಾಷಾಭ್ಯಾಸ

**ಅ) ನಾನಾರ್ಥ ಬರುವ ಪದಗಳನ್ನು ಓದಿ ತಿಳಿಯಿರಿ.**

೧. ಮಕ್ಕಳು ಆಟ **ಆಡುತ್ತಾರೆ** – **ಆಡು** ಒಂದು ಸಾಕು ಪ್ರಾಣಿ.

೨. **ಹೊಳೆಯಲ್ಲಿ** ಈಜುವರು – ಚಿನ್ನವು **ಹೊಳೆಯುತ್ತದೆ.**

೩. ಆಟಕ್ಕೆ **ಬನ್ನಿ** – **ಬನ್ನಿ** ವೃಕ್ಷವನ್ನು ಪೂಜಿಸುವರು.

೪. ಊಟ **ಸಾಕು** – ಗಿಳಿಯನ್ನು **ಸಾಕು**ವರು.

## ಭಾಷಾ ಚಟುವಟಿಕೆ

### ಭಾಗ 'ಅ'

**ಅ) ಕೆಳಗಿನ ಹೇಳಿಕೆಗಳಲ್ಲಿ ಬಿಟ್ಟಿರುವ ಪದವನ್ನು ಬರೆದು ಅರ್ಥಪೂರ್ಣಗೊಳಿಸಿರಿ.**

೧. ಸಜ್ಜನರ ಸಂಗ ಹೆಜ್ಜೇನು ____________

೨. ನೋಡಿ ತಿಳಿ ಮಾಡಿ ____________

**ಆ) ಕೊಟ್ಟಿರುವ ಪದಗಳಿಗೆ ಸಂಬಂಧಿಸಿದ ೫ ಪದಗಳನ್ನು ಬರೆಯಿರಿ.**

**ಮಾದರಿ :** ರಜೆ = ಶಾಲೆ, ಮಕ್ಕಳು, ಆಟ, ಚೆಂಡು, ಪ್ರವಾಸ

೧. ಅಜ್ಜ = ______ ______ ______ ______ ______

೨. ಹಸು = ______ ______ ______ ______ ______

**ಇ) ಕೆಳಗಿನ ವಾಕ್ಯಗಳಲ್ಲಿ ತಪ್ಪಾದ ಅಕ್ಷರಗಳನ್ನು ಸರಿಪಡಿಸಿ ಬರೆಯಿರಿ.**

೧. ರಾಜ, ರಾನಿ, ದೇವತೆಗಳ ಕತೆ, ಕೇಳುವೆಉ.

______________________________

೨. ಬಂದುಗಳು, ಮಣೆಗೆ ಬರುವನು.

______________________________

೩. ಪಕ್ಷಿ ಆರಿ ಹೋಇತು.

______________________________

೪. ಮಕ್ಕಳು ಹಾಡು ಆಡುವರು.

______________________________

ಈ) ಹಿಂದುಮುಂದಾಗಿರುವ ಪದಗಳನ್ನು ಜೋಡಿಸಿ, ಸರಿಯಾದ ವಾಕ್ಯ ರಚಿಸಿರಿ.

೧. ಅಜ್ಜನ / ಹೋಗುವರು / ಮಕ್ಕಳು / ಮನೆಗೆ

_______________________________________

೨. ಸ್ನಾನ / ಮಾಡಬೇಕು / ಪ್ರತಿದಿನ

_______________________________________

೩. ಹೇಳುವನು / ಕಥೆ / ಅಜ್ಜನು

_______________________________________

೪. ನದಿಯಲ್ಲಿ / ಈಜುವರು / ಮಕ್ಕಳು

_______________________________________



## ಭಾಗ 'ಆ'

೧. ಶಿಕ್ಷಕರ ಮಾರ್ಗದರ್ಶನದಂತೆ ಕೆಲವು ವಿಷಯಗಳಿಗೆ ಆಶುಲೇಖನವನ್ನು ಬರೆಯಿರಿ.
(**ಉದಾ:** ನನ್ನ ಮೆಚ್ಚಿನ ಆಟ, ನಮ್ಮ ಶಾಲೆ, ನಮ್ಮ ಮನೆ, ನನ್ನ ಮೆಚ್ಚಿನ ಗುರುಗಳು,)

೨. ವಿವಿಧ ಭಾವಗೀತೆ, ಭಕ್ತಿಗೀತೆ, ದೇಶಭಕ್ತಿಗೀತೆ, ಜನಪದಗೀತೆಗಳ ಸಂಗ್ರಹ ಮಾಡಿ ಹಾಡಿರಿ.

೩. ನೀವು ರಜೆಯಲ್ಲಿ ಯಾವ ಯಾವ ಊರಿಗೆ ಪ್ರವಾಸ ಹೋಗಿರುವಿರಿ?

೪. ನೀವು ಈ ವರ್ಷದ ರಜೆಯಲ್ಲಿ ಯಾವ ಊರಿಗೆ ಹೋಗಲು ಇಷ್ಟಪಡುವಿರಿ?

೫. ಎರಡು ಗುಂಪು ಆಗಿ ಹಳ್ಳಿಯ ಮತ್ತು ಪಟ್ಟಣದ ಆಟಗಳನ್ನು ಪಟ್ಟಿ ಮಾಡಿರಿ.



# ೧೪. ಪಿಂಗಳನ ಕಥೆ




– ಸುಧಾಮೂರ್ತಿ

**ಪ್ರವೇಶ :**

'ಸತ್ಯಕ್ಕೆ ಸಾವಿಲ್ಲ, ಸುಳ್ಳಿಗೆ ಸುಖವಿಲ್ಲ' 'ಸತ್ಯಮೇವ ಜಯತೇ' ಎಂಬ ನಾಣ್ಣುಡಿಯಂತೆ ಸತ್ಯವನ್ನೇ ಉಸಿರಾಗಿರಿಸಿಕೊಂಡಿದ್ದ ಹರಿಶ್ಚಂದ್ರ, ಪುಣ್ಯಕೋಟಿ ಇವರ ಕಥೆಗಳು ನಮ್ಮೆಲ್ಲರಿಗೂ ಆದರ್ಶಪ್ರಾಯ.





ಹಿಂದೆ ಗಾಂಧಾರ ದೇಶದಲ್ಲಿ ವಿದ್ಯಾಧರನೆಂಬ ಒಬ್ಬ ಸಾಮ್ರಾಟನಿದ್ದ. ಅವನಿಗೆ ಹೂವಿನ ಹುಚ್ಚು. ಅರಮನೆಯ ತೋಟದಲ್ಲಿ ಬಗೆಬಗೆಯ ಹೂಗಳನ್ನು ಬೆಳೆಸುತ್ತಿದ್ದ. ಬೇರೆ ದೇಶಗಳಿಂದಲೂ ಹೂ ತರಿಸಿ ಅದರ ತಳಿಗಳನ್ನು ಬೆಳೆಸಲು ಪ್ರಯತ್ನಿಸುತ್ತಿದ್ದ. ರಾಜನಿಗೆ ಮಕ್ಕಳಿರಲಿಲ್ಲ. 'ತನ್ನ ರಾಜ್ಯಕ್ಕೆ ಯಾರು ವಾರಸುದಾರರು?' ಎನ್ನುವ ಚಿಂತೆ ಸದಾಕಾಲ ಅವನನ್ನು ಕಾಡುತ್ತಿತ್ತು.

ಒಂದು ದಿನ ರಾಜ ವಿದ್ಯಾಧರ ಊರಲ್ಲಿ ಡಂಗೂರ ಹೊಡೆಸಿದ. "ನಾನು ಎಲ್ಲ ಮಕ್ಕಳಿಗೆ ವಿಧವಿಧವಾದ ಹೂವಿನ ಬೀಜಗಳನ್ನು ಕೊಡುತ್ತೇನೆ. ಆರು ತಿಂಗಳಲ್ಲಿ ಅದನ್ನು ಅವರು ಬೆಳೆದು ತೋರಿಸಬೇಕು. ಯಾರು ಚೆನ್ನಾಗಿ ಬೆಳೆಯುತ್ತಾರೋ ಅವರನ್ನು ದತ್ತು ತೆಗೆದುಕೊಳ್ಳುತ್ತೇನೆ. ಆ ಮಗುವೇ ಮುಂದೆ ಈ ರಾಜ್ಯಕ್ಕೆ ರಾಜನಾಗುತ್ತಾನೆ."





ಅರಮನೆಯ ಆವರಣದಲ್ಲಿ ಗದ್ದಲವೋ ಗದ್ದಲ. ಸಾವಿರಾರು ಮಕ್ಕಳೂ ಅವರ ಪಾಲಕರೂ ಬಂದು ಸೇರಿದರು. ಅದರಲ್ಲಿ ಪಿಂಗಳನೂ ಒಬ್ಬ. ಪಿಂಗಳನಿಗೆ ರಾಜನಂತೆ ಗಿಡಗಳ ಮತ್ತು ಹೂವಿನ ಹುಚ್ಚು. ಅವನ ತೋಟದಲ್ಲಿ ಅನೇಕ ಗಿಡಗಳನ್ನು ತನ್ನ ಗೆಳೆಯರೆಂಬಂತೆ ಸಾಕಿದ್ದನು.

ರಾಜ ಎಲ್ಲರಿಗೂ ಬೀಜಗಳನ್ನು ಹಂಚಿದ. ಎಲ್ಲ ಪಾಲಕರಿಗೂ ತಮ್ಮ ಮಗ ರಾಜನಾಗಲಿ ಎನ್ನುವ ಆಸೆ ಇದ್ದೇ ಇತ್ತು. ಹೀಗಾಗಿ ಅವರೂ ಮಕ್ಕಳೊಂದಿಗೆ ಗಿಡದ ಆರೈಕೆಗೆ ಸೇರಿಕೊಂಡರು.

ಪಿಂಗಳ ಕುಂಡದಲ್ಲಿ ಹೊಸ ಮಣ್ಣು, ಗೊಬ್ಬರ ಹಾಕಿ, ಬೀಜಗಳನ್ನು ಬಿತ್ತಿದ. ಪ್ರತಿದಿನ ತಪ್ಪದೇ ನೀರು ಹಾಕಿದ. ಎರಡು ತಿಂಗಳಾದರೂ ಮೊಳಕೆ ಒಡೆಯಲೇ ಇಲ್ಲ. ಆದರೆ ಉಳಿದ ಮಕ್ಕಳ ಕುಂಡದಲ್ಲಿ ಮೊಳಕೆ ಮೊಳೆತಿದ್ದವು. ಪಿಂಗಳನಿಗೆ ಯೋಚನೆಯಾಯಿತು. ಆತ ಸಣ್ಣ ಕುಂಡದಿಂದ ದೊಡ್ಡ ಕುಂಡಕ್ಕೆ ಬೀಜಗಳನ್ನು ಸ್ಥಳಾಂತರಿಸಿದ. ಮತ್ತಷ್ಟು ಹೆಚ್ಚು ಗಮನವಿರಿಸಿ ಆರೈಕೆ ಮಾಡಿದ. ಮೊಳಕೆ ಒಡೆಯಲೇ ಇಲ್ಲ.

ಸ್ಪರ್ಧೆಯ ದಿನ ಬಂದಿತು. ಮಕ್ಕಳೆಲ್ಲಾ ಒಳ್ಳೊಳ್ಳೆಯ ಬಟ್ಟೆ ಧರಿಸಿ ತಮ್ಮ ತಮ್ಮ ಕುಂಡದೊಂದಿಗೆ, ದೊಡ್ಡ ದೊಡ್ಡ ಗಿಡದೊಂದಿಗೆ ಅರಮನೆಯ ಮುಂದೆ ಸೇರಿದ್ದರು.

ಪಿಂಗಳನಿಗೆ ಅರಮನೆಗೆ ಹೋಗಲು ಮನಸೇ ಇರಲಿಲ್ಲ.

ಆತನ ತಂದೆ "ಮಗೂ, ನೀನೂ ಸ್ಪರ್ಧೆಗೆ ಹೋಗು" ಎಂದರು.

"ಅಪ್ಪಾ, ಬರೀ ಕುಂಡದೊಂದಿಗೆ ಹೋದರೆ ಅವಮಾನವಲ್ಲವೇ? ಬಹುಮಾನವಂತೂ ದೂರವೇ ಉಳಿಯಿತು." ಎಂದ ಪಿಂಗಳ.

"ಮಗೂ, ನೀನು ಕಷ್ಟಪಟ್ಟು ಕೆಲಸ ಮಾಡಿದ್ದೀಯೇ, ಅದಕ್ಕೆ ಅವಮಾನ ಪಡುವ ಕಾರಣವಿಲ್ಲ. ನೀನು ಹೋಗಲೇಬೇಕು" ಎಂದು ತಂದೆ ಪಿಂಗಳನನ್ನು ಹುರಿದುಂಬಿಸಿದರು.

ಪಿಂಗಳ ವಿಧೇಯನಾಗಿ, ಆದರೆ ಅಳುಕುತ್ತಾ ಕುಂಡವನ್ನು ಹೊತ್ತುಕೊಂಡು ಅರಮನೆಗೆ ಹೋದ.

ಮಹಾರಾಜ ವಿದ್ಯಾಧರ ಪ್ರತಿಯೊಬ್ಬರ ಹೂವಿನ ಗಿಡಗಳನ್ನೂ ನೋಡುತ್ತಾ ಬಂದ. ಆದರೆ ಅವನ ಮುಖದಲ್ಲಿ ಸಂತೋಷವೇ ಇರಲಿಲ್ಲ. ಕೊನೆಗೆ ಆತ ಪಿಂಗಳನ ಕುಂಡದ ಹತ್ತಿರ ಬಂದ.





"ಮಗೂ, ನಾನು ಹೂವಿನ ಗಿಡಗಳ ಸ್ಪರ್ಧೆಗೆ ಕರೆದರೆ ನೀನು ಬರೀ ಕುಂಡ ಹೊತ್ತು ತಂದಿದ್ದೀಯಲ್ಲಪ್ಪಾ?" ಎಂದು ಕೇಳಿದನು.

ಅದಕ್ಕೆ ಪಿಂಗಳ "ಅರಸರೇ ನಾನು ನನ್ನ ಪ್ರಯತ್ನವನ್ನು ಶಕ್ತಿಮೀರಿ ಮಾಡಿದ್ದೇನೆ. ಅದಕ್ಕೆ ಸ್ಪರ್ಧೆಗೆ ಬಂದೆ" ಎಂದು ಉತ್ತರಿಸಿದನು.

ರಾಜ ವಿದ್ಯಾಧರ ನಕ್ಕು, "ಹೌದು, ಈ ಸ್ಪರ್ಧೆಯಲ್ಲಿ ಜಯ ಪಡೆದವನು ನೀನೆ! ಯಾಕೆಂದರೆ ನಾನು ಕೊಟ್ಟ ಬೀಜಗಳೆಲ್ಲಾ ಹುರಿದ ಬೀಜಗಳಾಗಿದ್ದವು. ಎಂಥಾ ಆರೈಕೆ ಮಾಡಿದರೂ ಗಿಡಗಳು ಬರುತ್ತಿರಲಿಲ್ಲ. ತಮ್ಮ ಮಕ್ಕಳು ರಾಜನಾಗಲೆಂದು ಇತರ ತಂದೆತಾಯಿಗಳು ಬೇರೇ ಬೀಜವನ್ನು

ಬಿತ್ತಿ ಹೂ ತರಿಸಿದ್ದಾರೆ. ನೀನು ಮಾತ್ರ ಸತ್ಯಸಂಧ. ಅದಕ್ಕಿಂತ ಹೆಚ್ಚಾಗಿ ನಿನ್ನ ತಾಯಿ-ತಂದೆ ನೀನು ರಾಜನಾಗಲಿ ಎಂದು ಮೋಸಮಾಡಲಿಲ್ಲ. ರಾಜನಾಗುವ ಅರ್ಹತೆ ನಿನಗೆ ಮಾತ್ರ ಇದೆ" ಎಂದ. ಪಿಂಗಳನ ಮುಖ ಸಂತೋಷದಿಂದ ಅರಳಿತು.

*ನಿಷ್ಠೆ, ಪ್ರಾಮಾಣಿಕ ಪ್ರಯತ್ನದಿಂದ ಯಶಸ್ಸು ಸಿದ್ಧಿಸುತ್ತದೆ.*

**ಕೃತಿಕಾರರ ಪರಿಚಯ:**



ಬೆಂಗಳೂರಿನ ಇನ್‌ಫೋಸಿಸ್‌ನ ಸುಧಾಮೂರ್ತಿಯವರು ಹಾವೇರಿ ಜಿಲ್ಲೆಯ ಶಿಗ್ಗಾವಿಯವರು. ಇವರು ೧೯೫೦ ಆಗಸ್ಟ್ ೧೯ ರಂದು ಜನಿಸಿದರು. ಸಣ್ಣಕಥೆ, ಕಾದಂಬರಿ ಮತ್ತು ಪ್ರವಾಸ ಕಥನಗಳ ಮೂಲಕ ತಮ್ಮ ಲೇಖನಿಯ ಶಕ್ತಿಯನ್ನು ಹೊರಗೆಡವಿದ್ದಾರೆ. ಈ ಕಥೆಯನ್ನು ಅವರ "ಮಕ್ಕಳಿಗಾಗಿ ನನ್ನ ಮೆಚ್ಚಿನ ಕಥೆಗಳು" ಎಂಬ ಪುಸ್ತಕದಿಂದ ಆರಿಸಿಕೊಳ್ಳಲಾಗಿದೆ. ಇವರ ಹಲವು ಕೃತಿಗಳು ದೇಶದ ಅನೇಕ ಭಾಷೆಗಳಲ್ಲಿ ಪ್ರಕಟವಾಗಿವೆ. ಇವರಿಗೆ ಪದ್ಮಶ್ರೀ, ರಾಜ್ಯೋತ್ಸವ, ಅತ್ತಿಮಬ್ಬೆ ಪ್ರಶಸ್ತಿಗಳು ಹಾಗೂ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ ಸಂದಿವೆ.



| | | |
|---|---|---|
| **ಕ್ಷೇತ್ರ** | : | ಬರೆಯುವುದು. |
| **ಸಾಮರ್ಥ್ಯ** | : | ಅಕ್ಷರ ಗುಣಿತಾಕ್ಷರ ಮತ್ತು ಒತ್ತಕ್ಷರಗಳನ್ನು ನಕಲು ಮಾಡುವುದು. |

## ಪದಗಳ ಅರ್ಥ :

ಅರಳು–ವಿಕಾಸವಾಗು;
ಅಳುಕು–ಹೆದರು, ಹಿಂಜರಿಕೆ;
ಆರೈಕೆ–ರಕ್ಷಣೆ, ಪೋಷಣೆ, ಶುಶ್ರೂಷೆ;
ಇಷ್ಟ–ಬಯಕೆ;
ಚಿಂತೆ–ಆತಂಕ, ಕಳವಳ;
ಚಿಗುರು–ತಳಿರು, ಕುಡಿ, ಅಂಕುರಿಸು, ಮೊಳಕೆ;
ತಳಿ–ವಂಶ, ಕುಲ;
ಪಾಲಕರು–ಕಾಪಾಡುವ ವ್ಯಕ್ತಿ, ರಕ್ಷಕ, ತಂದೆ ತಾಯಿ;
ಪ್ರಯತ್ನ–ಉದ್ದೇಶ, ಹೆಚ್ಚು ಶ್ರಮ;
ಯೋಚನೆ–ಚಿಂತೆ, ಆತಂಕ, ಕಳವಳ;
ವಿಧ ವಿಧ–ಬೇರೆ ಬೇರೆ;
ಸತ್ಯಸಂಧ–ಸತ್ಯವಂತ;
ಸಾಮ್ರಾಟ–ಚಕ್ರವರ್ತಿ, ಸಾರ್ವಭೌಮ, ಅರಸ, ರಾಜ;
ಹುರಿದುಂಬಿಸು–ಉತ್ಸಾಹನೀಡು, ಪ್ರೋತ್ಸಾಹಿಸು.

**ಟಿಪ್ಪಣಿ :**

**ವಾರಸುದಾರ** – ವಂಶ ಪರಂಪರೆಯಿಂದ ಬರುವ ಆಸ್ತಿಯ ಹಕ್ಕು ಪಡೆಯುವವರು

**ಡಂಗೂರ** – ತಮಟೆ, ಡೋಲು, ಮೊದಲಾದುವನ್ನು ಬಾರಿಸಿ ಯಾವುದಾದರು ವಿಷಯವನ್ನು ಘೋಷಿಸಿ ಬಹಿರಂಗಪಡಿಸುವುದು.

**ದತ್ತು ಸ್ವೀಕಾರ** – ಮಕ್ಕಳಿಲ್ಲದವರು ಶಾಸ್ತ್ರೋಕ್ತವಾಗಿ ಮತ್ತು ಕಾನೂನುಬದ್ಧವಾಗಿ ಬೇರೆಯವರಿಂದ ಮಗ ಅಥವಾ ಮಗಳನ್ನು ದಾನವಾಗಿ ಪಡೆಯುವುದು.

## ಅಭ್ಯಾಸ

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ರಾಜ ಅರಮನೆಯ ತೋಟದಲ್ಲಿ ಏನನ್ನು ಬೆಳೆಸಿದ್ದನು?

೨. ರಾಜ ಮಕ್ಕಳಿಗೆಲ್ಲ ಏನನ್ನು ಹಂಚಿದನು?

೩. ಮಕ್ಕಳು ಯಾರೊಂದಿಗೆ ಅರಮನೆಗೆ ಬಂದಿದ್ದರು?

೪. ಪಿಂಗಳ ಗಿಡಗಳನ್ನು ಹೇಗೆ ಸಾಕಿದ್ದನು?

೫. ಪಿಂಗಳ ಸ್ಪರ್ಧೆಯ ದಿನ ಅರಮನೆಗೆ ಹೇಗೆ ಹೋದನು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ರಾಜ ವಿದ್ಯಾಧರನಿಗೆ ಯಾವ ಚಿಂತೆ ಕಾಡುತ್ತಿತ್ತು?

೨. ಪಿಂಗಳ ಬೀಜಗಳನ್ನು ಹೇಗೆ ಆಯ್ಕೆ ಮಾಡಿದನು?

______________________________

______________________________

______________________________

೩. ವಿದ್ಯಾಧರ ರಾಜ ಪಿಂಗಳನಿಗೆ ಸತ್ಯಸಂಧ ಎಂದು ಹೇಳಲು ಕಾರಣವೇನು?

______________________________

______________________________

______________________________

೪. ಪಿಂಗಳನಲ್ಲಿ ನೀವು ಮೆಚ್ಚುವ ಗುಣಗಳು ಯಾವುವು?

______________________________

______________________________

______________________________

೫. ಯಾವುದಾದರೂ ಹತ್ತು ಹೂವುಗಳನ್ನು ಹೆಸರಿಸಿರಿ?

______________________________

______________________________

______________________________



**ಇ) ಕೆಳಗಿನ ಮಾತುಗಳನ್ನು ಯಾರು ಯಾರಿಗೆ ಹೇಳಿದರು?**

೧. 'ಆರು ತಿಂಗಳಲ್ಲಿ ಅದನ್ನು ಅವರು ಬೆಳೆದು ತೋರಿಸಬೇಕು'

ಯಾರು ಹೇಳಿದರು? ______________________

ಯಾರಿಗೆ ಹೇಳಿದರು? ______________________

೨. ‘ನೀನು ಸ್ಪರ್ಧೆಗೆ ಹೋಗು’.

ಯಾರು ಹೇಳಿದರು? ______________________

ಯಾರಿಗೆ ಹೇಳಿದರು? ______________________

೩. ‘ಬರೀ ಕುಂಡದೊಂದಿಗೆ ಹೋದರೆ ಅವಮಾನವಲ್ಲವೇ?’

ಯಾರು ಹೇಳಿದರು? ______________________

ಯಾರಿಗೆ ಹೇಳಿದರು? ______________________

೪. ‘ರಾಜನಾಗುವ ಅರ್ಹತೆ ನಿನಗೆ ಮಾತ್ರ ಇದೆ.’

ಯಾರು ಹೇಳಿದರು? ______________________

ಯಾರಿಗೆ ಹೇಳಿದರು? ______________________

**ಈ) ಆವರಣದಲ್ಲಿರುವ ಪದವನ್ನು ಆರಿಸಿ ಬಿಟ್ಟ ಸ್ಥಳದಲ್ಲಿ ಬರೆಯಿರಿ.**

೧. ವಿದ್ಯಾಧರ ರಾಜನಿಗೆ __________ ಗಳೆಂದರೆ ಇಷ್ಟ.

(ತಿಂಡಿ, ಹೂವು, ಹಣ್ಣು, ತರಕಾರಿ)

೨. ಅರಮನೆಯ ಆವರಣದಲ್ಲಿ __________

(ಗಲಿಬಿಲಿ, ಸಡಗರ, ಗಡಿಬಿಡಿ, ಗದ್ದಲವೋ ಗದ್ದಲ)

೩. ಸ್ಪರ್ಧೆಗೆ ಬಂದ ಎಲ್ಲಾ ಮಕ್ಕಳ ಕುಂಡದಲ್ಲಿ ಸಸಿಗಳು __________

(ಬಾಗಿದ್ದವು, ಹರಡಿದ್ದವು, ಚಿಗುರಿದ್ದವು, ಚದುರಿದ್ದವು)

೪. ವಿದ್ಯಾಧರ ರಾಜನು ಕೊಟ್ಟ ಹೂವಿನ ಬೀಜಗಳೆಲ್ಲಾ __________ ಬೀಜಗಳು.

(ಹುರಿದ, ಹಸಿಯಾದ, ಒಣಗಿದ, ಚಿಕ್ಕದಾದ)

## ಭಾಷಾಭ್ಯಾಸ

**ಅ) ಮಾದರಿ ವಾಕ್ಯ ಗಮನಿಸಿ, ಅದರಂತೆಯೇ ಕೆಳಗಿನ ಪದ ಬಳಸಿ ಬೇರೆ ವಾಕ್ಯ ರಚಿಸಿರಿ.**

**ಮಾದರಿ : ವಿಧ ವಿಧ :** ಮನೆಯಲ್ಲಿ ವಿಧ ವಿಧವಾದ ವಸ್ತುಗಳಿರುತ್ತವೆ.

೧. ಆರೈಕೆ : ______________________

೨. ಹುರಿದುಂಬಿಸು : ______________________

೩. ಮೊಳಕೆ : ______________________

## ಆ) ಕೊಟ್ಟಿರುವ ಪದಗಳಿಗೆ ಸರಿಯಾದ ವಿರುದ್ಧಾರ್ಥಕ ಪದ ಹೊಂದಿಸಿ ಬರೆಯಿರಿ.

| ಅ ಪಟ್ಟಿ | ಬ ಪಟ್ಟಿ | ಉತ್ತರಗಳು |
|---|---|---|
| ೧. ಬಡತನ | ಅ) ಅವಿಶ್ವಾಸ | ____________ |
| ೨. ಸುಖ | ಆ) ಅನಾರೋಗ್ಯ | ____________ |
| ೩. ಆರೋಗ್ಯ | ಇ) ದುಃಖ | ____________ |
| ೪. ವಿಶ್ವಾಸ | ಈ) ಸಿರಿತನ | ____________ |
| | ಉ) ಬೆಳಕು | ____________ |

## ಭಾಷಾ ಚಟುವಟಿಕೆ

### ಭಾಗ – 'ಅ'

## ಅ) ಆವರಣದಲ್ಲಿರುವ ಪದಗಳನ್ನು ಗಮನಿಸಿ ಬಿಟ್ಟ ಸ್ಥಳ ತುಂಬಿರಿ. ಓದಿ ಬರೆಯಿರಿ.

[ತರತರ, ಥರಥರ, ಪಟಪಟ, ಫಳಫಳ, ಜುಳುಜುಳು, ಝುಣಝುಣ]

೧. ಮಕ್ಕಳು ____________ ದ ಉಡುಪುಗಳನ್ನು ತೊಟ್ಟಿದ್ದರು.

೨. ಆಗಸದಲ್ಲಿ ಗಾಳಿಪಟವು ____________ ನೆ ಹಾರಿತು.

೩. ನಾಣ್ಯಗಳು ತುಂಬಿದ ಚೀಲವು ____________ ಎಂದು ಸದ್ದು ಮಾಡುತ್ತದೆ.

೪. ಆಭರಣವು ____________ ನೆ ಹೊಳೆಯುತ್ತದೆ.

೫. ಭಯಗೊಂಡ ಬಾಲಕನು ____________ ನೆ ನಡುಗಿದ.

೬. ನೀರು ಹರಿಯುವಾಗ ____________ ಎಂದು ಸದ್ದು ಮಾಡುತ್ತದೆ.

ಆ) ಈ ಕೆಳಗಿನ ವಾಕ್ಯಗಳನ್ನು ಓದಿ ಅದರಂತೆ ನಕಲು ಮಾಡಿರಿ.

೧.

| | | | | | | | | |
|---|---|---|---|---|---|---|---|---|
| ತಾ | ಯಿ | ಗಿಂ | ತ | | ಬಂ | ಧು | ವಿ | ಲ್ಲ |
| | | | | | | | | |

೨.

| | | | | | | | | |
|---|---|---|---|---|---|---|---|---|
| ಉ | ಪ್ಪಿ | ಗಿಂ | ತ | | ರು | ಚಿ | ಯಿ | ಲ್ಲ |
| | | | | | | | | |

ಇ) ಮಧ್ಯದಲ್ಲಿರುವ ಅಕ್ಷರದ ಸಹಾಯದಿಂದ ಸುತ್ತಲೂ ಇರುವ ಅಕ್ಷರಗಳ ಮೊದಲಿಗೆ ಸೇರಿಸಿ ಪದಗಳನ್ನು ರಚಿಸಿರಿ :

**ಮಾದರಿ :** ಕಡಲು



ಈ) ಅಕ್ಷರ ಬಂಧದಲ್ಲಿರುವ ಪ್ರಾಣಿ/ ಪಕ್ಷಿಗಳನ್ನು ಪತ್ತೆಮಾಡಿ ಬರೆಯಿರಿ :

| | | | | | | | |
|---|---|---|---|---|---|---|---|
| ಆ | ಕೋ | ಹು | ಸಾ | ಚಿ | ರ | ತೆ | ತ್ತು |
| ಡು | ಳಿ | ಲಿ | ಕು | ಣ | ಕೋ | ಎ | ಹ |
| ಪಾ | ಎ | ವಾ | ಳ | ಆ | ಆ | ಕ | ಳು |
| ಕ | ತ್ತೆ | ಹುಂ | ಆ | ಕ | ರು | ಐ | ಮಾ |
| ಸಾ | ರಂ | ಗ | ದಿ | ವಿ | ದು | ಯ | ಇ |
| ಸಿಂ | ನಾ | ಹಂ | ಸ | ಬಾ | ನ | ರಿ | ಲಿ |
| ಹ | ಣು | ಬ | ಎ | ಮ್ಮೆ | ವಿ | ಗೂ | ಬೆ |
| ದ್ದು | ಕ | ರ | ಖ | ದು | ಲು | ತ | ಕ್ಕು |

**ಮಾದರಿ :** ಆಕಳು

------------------------------

------------------------------

------------------------------

------------------------------

------------------------------

------------------------------

## ಭಾಗ – 'ಆ'

೧. ನಿಮ್ಮ ಮನೆ ಅಥವಾ ಶಾಲೆಯ ಆವರಣದಲ್ಲಿ ವಿವಿಧ ರೀತಿಯ ಹೂವಿನ ಬೀಜಗಳನ್ನು ಹಾಕಿರಿ. ಗಿಡ ನೆಟ್ಟು, ಮರ ಬೆಳೆಸಿರಿ.

೨. ನಿಮಗೆ ತಿಳಿಯದ ಹಾಗೆ ಹುರಿದ ಅಥವಾ ಒಣಗಿದ ಬೀಜಗಳನ್ನು ಕೊಟ್ಟಾಗ ನೀವು ಏನು ಮಾಡುವಿರೆಂಬುದನ್ನು ಬರೆಯಿರಿ.

೩. ಗುಣಿತಾಕ್ಷರ, ಒತ್ತಕ್ಷರವಿರುವ ಪದಗಳ ಉಕ್ತಲೇಖನ ಬರೆಯಿರಿ.

೪. ಪುಟಾಣಿ ವಿಜಯ, ಬಾಲಮಂಗಳ, ಚಂಪಕ, ಚುಟುಕ, ಗಿಳಿವಿಂಡು, ಗೊಂಬೆಮನೆ, ಬಾಲಮಿತ್ರ, ಚಂದಮಾಮ ಮೊದಲಾದ ನಿಯತಕಾಲಿಕೆಗಳನ್ನು ಸಂಗ್ರಹಿಸಿ ಓದಿರಿ.

೫. ನಿಮ್ಮ ಮೇಲೆ ಪ್ರಭಾವ ಬೀರಿದ ಕಥೆಗಳು ಹಾಗೂ ಅವುಗಳ ಮೌಲ್ಯಗಳನ್ನು ತಿಳಿಸಿರಿ.

೬. ಕೊಟ್ಟಿರುವ ಪದಗಳನ್ನು ಬಳಸಿಕೊಂಡು ಕಥೆ ರಚಿಸಿರಿ.

**ಉದಾ:** ಇರುವೆ, ಮರ, ನೀರು, ಎಲೆ, ಪಾರಿವಾಳ, ಬೇಡ, ಬಿಲ್ಲು, ಬಾಣ, ಮರದ ಕೊಂಬೆ.

## ವ್ಯಾಕರಣ

### ನಾಮಪದ :

ಸಾಮಾನ್ಯವಾಗಿ ವ್ಯಕ್ತಿ, ವಸ್ತು, ಸ್ಥಳ ಮತ್ತು ಪ್ರಾಣಿಗಳ ಹೆಸರುಗಳನ್ನು ಸೂಚಿಸುವ ಪದಗಳಿಗೆ 'ನಾಮಪದ' ಎನ್ನುವರು.

**ಉದಾಹರಣೆ :** ಸುಮ, ಮಣ್ಣು, ಶಿವಮೊಗ್ಗ, ನವಿಲು ಇತ್ಯಾದಿ.

ನಾಮ ಪದಗಳಲ್ಲಿ ಅನೇಕ ವಿಧಗಳಿವೆ, ಅವುಗಳಲ್ಲಿ ವಸ್ತುವಾಚಕವೂ ಒಂದು ಇವನ್ನು ಮೂರು ವಿಧಗಳಾಗಿ ವಿಂಗಡಿಸಿದೆ.




**ರೂಢನಾಮ** : ರೂಢಿಯಿಂದ ಬಂದ ಹೆಸರುಗಳನ್ನು ರೂಢನಾಮ ಎನ್ನುವರು.

**ಉದಾಹರಣೆ** : ನದಿ, ಪರ್ವತ, ಮನುಷ್ಯ, ಹೆಂಗಸು, ದೇಶ, ಬೀಜ, ಮಗ, ಬಟ್ಟೆ.

**ಅಂಕಿತನಾಮ** : ಗುರುತಿಗಾಗಿ ಹಾಗೂ ವ್ಯವಹಾರದ ಉಪಯೋಗಕ್ಕೆ ಇಟ್ಟುಕೊಂಡ ಹೆಸರುಗಳೆಲ್ಲಾ ಅಂಕಿತನಾಮಗಳು.

**ಉದಾಹರಣೆ** : ಗಂಗಾ, ಕಾವೇರಿ, ರಕ್ಷಾ, ಬೆಂಗಳೂರು, ಮಾವಿನಹಣ್ಣು, ವಿದ್ಯಾಧರ

**ಅನ್ವರ್ಥನಾಮ** : ರೂಪ, ಗುಣ, ಸ್ವಭಾವಾದಿ, ವಿಶೇಷವಾದ ಅರ್ಥಕ್ಕೆ ಅನುಗುಣವಾಗಿ ಇಟ್ಟ ಹೆಸರುಗಳೆಲ್ಲಾ ಅನ್ವರ್ಥನಾಮಗಳು.

**ಉದಾಹರಣೆ** : ವ್ಯಾಪಾರಿ, ಶಿಕ್ಷಕ, ವೈದ್ಯ, ವಿದ್ವಾಂಸ, ಅರಸ.

## ಪೂರಕ ಅಧ್ಯಯನ

# ೧. ನಮ್ಮೂರು

–ಜೋಳದರಾಶಿ ದೊಡ್ಡನಗೌಡ

ನಮ್ಮೂರು ಇದು ನಮ್ಮೂರು
ಮುತ್ತಿಗಿಂತ ಲೇಸು ನಮ್ಮ ಜೋಳದರಾಶಿ॥

ಬಡವಿಗೆ ಮುತ್ತು ಲಕ್ಷಣ
ಒಡಲಿಗೆ ಜೋಳ ಪ್ರಾಣ
ಕಡುಬಡವ ಮೊದಲಾಗಿ ಶ್ರೀಮಂತ ಕಡೆಯಾಗಿ
ಎಲ್ಲರಿಗೆ ಜೀವಶಕ್ತಿ ನೀಡುವ ಜೋಳದರಾಶಿ ॥೧॥

ನಮ್ಮೂರು ನೀರು ತೀರ್ಥ
ನಮ್ಮೂರು ನೆಲ ಕ್ಷೇತ್ರ
ನಮ್ಮೂರು ರಾಮೇಶ್ವರನು ಕಾಶಿವಿಶ್ವೇಶ್ವರನು
ನಮ್ಮೂರು ರೈತರು ಶಿವಶರಣ ಕಾಯಕದವರು ॥೨॥

ಲಲಿತಕಲೆ ನಾಟ್ಯಗಳು
ಬೈಲಾಟ ಭಜನೆಗಳು
ಒಲವಿಂದ ಅರಬರಬಂದರು ಲೆಕ್ಕಿಸದೆ
ಕಲೆಯ ಪೋಷಿಸಿ ನಲಿವ ರಸಿಕರು ನಮ್ಮವರು ॥೩॥

ಸಣ್ಣ ಊರಾದರೇನು
ಮಣ್ಣಿನಗುಣ ಘನ
ಗಣ್ಯ ಗಾಯಕ, ನಟ, ಕವಿ, ಗಮಕಿಯನಿತ್ತ
ಗಣ್ಯದೇಶದ ಖ್ಯಾತಿ, ನಮ್ಮೂರಿತ್ತುದೆ ನೋಡ ॥೪॥

ಪ್ರಶ್ನೆ ಫಲಾನುಭವರು
ಜ್ಯೋತಿರ್ವಿದ್ವಾಂಸರು
ಆಂಧ್ರ ಕರ್ನಾಟಕದ ಗಡಿನಾಡ ಖ್ಯಾತರು
ಸುಂದರ ರಾಮೇಶ್ವನ ಜೋಳದರಾಶಿಯವರು ॥೫॥

ನಮ್ಮೂರೇ ನಮಗೆ ಸ್ವರ್ಗ
ಬಕಾಸುರನಿದ್ದರೂ
ಏಕಚಕ್ರ ನಗರಿಯಜನ ಅಲ್ಲಿಯೇ ನೆಲೆಸಿರಲಿಲ್ಲವೆ?
ಅದು ನಮ್ಮೂರೆಂಬ ಅಭಿಮಾನ ॥೬॥

**ಕೃತಿಕಾರರ ಪರಿಚಯ:**



ಶರಣಕವಿ ಎಂದೇ ಹೆಸರಾಗಿರುವ ಜೋಳದರಾಶಿ ದೊಡ್ಡನಗೌಡರು ಕವಿ, ಗಮಕಿ ಹಾಗೂ ನಟರೂ ಆಗಿದ್ದರು. ಇವರು ಬಳ್ಳಾರಿ ಜಿಲ್ಲೆಯ ಜೋಳದರಾಶಿ ಗ್ರಾಮದಲ್ಲಿ ೨೭-೦೭-೧೯೧೦ರಲ್ಲಿ ಜನಿಸಿದರು. 'ನಂದೇ ನಾನೋದಿದೆ' (ಆತ್ಮಕತೆ), 'ನೀವೇನಂತೀರಿ' (ವಿಚಾರ ಚಿಂತನೆ), 'ತುಕಾರಾಮ', 'ಕನಕದಾಸ', 'ಕ್ರಾಂತಿ ಪುರುಷ ಬಸವಣ್ಣ' (ನಾಟಕಗಳು) 'ನನ್ನ ಹಂಪೆ', 'ರಸವರ್ಷ' 'ರಾಮೇಶ ವಚನಗಳು'(ಕವನ ಸಂಗ್ರಹಗಳು), 'ಬಯಲ ಗಳಿಕೆಯ ಬೆಳಗು' ಮುಂತಾದವು ಇವರ ಪ್ರಮುಖ ಕೃತಿಗಳು. ರಾಜ್ಯ ಸಂಗೀತ ಅಕಾಡೆಮಿ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಇವರಿಗೆ ಲಭ್ಯವಾಗಿವೆ. ಇವರು ೧೯೯೪ರಲ್ಲಿ ನಿಧನರಾದರು.

**ಪದಗಳ ಅರ್ಥ:**

ಅರಬರ – ಕ್ಷಾಮ, ದುರ್ಭಿಕ್ಷ , ಅಭಾವ, ಕೊರತೆ;

ಒಡಲು – ಹೊಟ್ಟೆ, ಗರ್ಭ, ಶರೀರ, ದೇಹ;

ಬೈಲಾಟ – ಬಯಲಾಟ;

ರಸಿಕ – ರಸಾನುಭವ ಹೊಂದಬಲ್ಲವನು, ರಸಜ್ಞ, ಹಾಸ್ಯ ಮನೋಭಾವದ.

## ಅಭ್ಯಾಸ

### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. 'ನಮ್ಮೂರು' ಪದ್ಯದಲ್ಲಿ ತಿಳಿಸಿರುವಂತೆ ಮುತ್ತಿಗಿಂತಲೂ ಲೇಸಾದ ಊರು ಯಾವುದು?

________________________________________

೨. ದೊಡ್ಡನಗೌಡರು ಬಡವಿಗೆ ಯಾವುದು ಲಕ್ಷಣ ಎಂದು ಹೇಳಿದ್ದಾರೆ?

೩. 'ನಮ್ಮೂರು' ಕವನದಲ್ಲಿ ಹೇಳಿರುವಂತೆ ಒಡಲಿಗೆ ಯಾವುದು ಪ್ರಾಣ?

೪. ದೊಡ್ಡನಗೌಡರು ಹೇಳಿರುವಂತೆ ಬಡವ ಬಲ್ಲಿದನೆನ್ನದೆ ಎಲ್ಲರಿಗೂ ಜೀವಶಕ್ತಿಯನ್ನು ನೀಡುವುದು ಯಾವುದು?

೫. ಜೋಳದರಾಶಿ ರಾಮೇಶ್ವರನನ್ನು ಕವಿ ಯಾರಿಗೆ ಹೋಲಿಸಿದ್ದಾರೆ?

೬. ನಮ್ಮೂರ ಜನ ರಸಿಕರೆಂದು ಕವಿ ಏಕೆ ಹೇಳಿದ್ದಾರೆ?

೭. ಕವಿಯ ಪ್ರಕಾರ ಜೋಳದರಾಶಿಯ ರೈತರು ಯಾವ ಕಾಯಕದವರು?



# ೨. ಏಕಾಗ್ರತೆ

– ಸಂಗ್ರಹ

ದ್ರೋಣಾಚಾರ್ಯರು ರಾಜಕುಮಾರರಿಗೆ ಧನುರ್ವಿದ್ಯೆಯ ಶಿಕ್ಷಣವನ್ನು ನೀಡುತ್ತಿದ್ದರು. ಒಮ್ಮೆ ಅರ್ಜುನನು ಊಟಮಾಡುತ್ತಿರುವಾಗ ದೀಪವು ನಂದಿಹೋಯಿತು. ಆ ಕತ್ತಲೆಯಲ್ಲಿಯೂ ಊಟವನ್ನು ಮುಂದುವರಿಸಿದನು. ಅವನ ಕೈಯಲ್ಲಿರುವ ಅನ್ನದ ತುತ್ತು ಕತ್ತಲೆಯಲ್ಲಿಯೂ ಗುರಿತಪ್ಪದೆ ಬಾಯಿಯೊಳಗೆ ಪ್ರವೇಶಿಸುವುದನ್ನು ಕಂಡ ಅರ್ಜುನನ ತಲೆಯಲ್ಲಿ ಆಗ ವಿಚಾರವೊಂದು ಸುಳಿಯಿತು. “ಕತ್ತಲೆಯಲ್ಲಿ ಕಾಣಿಸದಿದ್ದರೂ ಅಭ್ಯಾಸದ ಬಲದಿಂದ ಬಟ್ಟಲಲ್ಲಿರುವ ಅನ್ನವನ್ನು ಕೈಯಲ್ಲಿ ತೆಗೆದು, ಕೈಯಲ್ಲಿರುವ ತುತ್ತು ಬಾಯಿಗೆ ಸರಿಯಾಗಿ ತಲುಪುವುದಾದರೆ ನಾನು ಇದೇ ಅಭ್ಯಾಸವನ್ನು ಧನುರ್ವಿದ್ಯೆಯಲ್ಲಿಯೂ ಏಕೆ ಅಳವಡಿಸಿಕೊಳ್ಳಬಾರದು?” ಎಂದು ಆಲೋಚಿಸಿದನು.

ಮುಂದೆ ಅರ್ಜುನನು ಸತತ ಅಭ್ಯಾಸದಿಂದ ಕತ್ತಲೆಯಲ್ಲಿಯೂ ಗುರಿಗೆ ಸರಿಯಾಗಿ ಬಾಣವನ್ನು ಪ್ರಯೋಗಿಸುವುದರಲ್ಲಿ ನಿಪುಣನಾದನು.

ಒಮ್ಮೆ ತಮ್ಮ ಶಿಷ್ಯರನ್ನು ಪರೀಕ್ಷಿಸಲು ದ್ರೋಣಾಚಾರ್ಯರು ಒಂದು ಪ್ರಯೋಗವನ್ನು ನಡೆಸಿದರು. ಮರದ ಮೇಲೆ ಒಂದು ಕೃತಕ ಹಕ್ಕಿಯನ್ನು ನಿಲ್ಲಿಸಿ ಅದಕ್ಕೆ ಸರಿಯಾಗಿ ಗುರಿಯಿಟ್ಟು ಬಾಣವನ್ನು ಪ್ರಯೋಗಿಸಿ ಹಕ್ಕಿಯ ಶಿರಸ್ಸನ್ನು ತುಂಡರಿಸಬೇಕೆಂದು ಶಿಷ್ಯರಿಗೆ ಆಜ್ಞಾಪಿಸಿದರು.

ಮೊದಲು ದುರ್ಯೋಧನನ ಸರದಿ. ಅವನು ಗುರಿ ಇಟ್ಟನು. ಗುರುಗಳು “ನಿನಗೇನು ಕಾಣುತ್ತಿದೆ?” ಎಂದು ಪ್ರಶ್ನಿಸಿದರು. “ಮರ, ಅಲ್ಲಿರುವ ಹಣ್ಣುಗಳು, ಸುತ್ತಮುತ್ತಲೂ ಇರುವ ರಾಜಕುಮಾರರು, ಇವೆಲ್ಲವೂ ಕಾಣಿಸುತ್ತಿವೆ” ಎಂದನು ದುರ್ಯೋಧನ. ಆಗ ಗುರುಗಳು “ನೀನು ಗುರಿಮುಟ್ಟಲಾರೆ, ಧನುಸ್ಸನ್ನು ಕೆಳಗಿಟ್ಟು ದೂರ ನಡೆ” ಎಂದು ಆಜ್ಞಾಪಿಸಿದರು.

ಅನಂತರ ಯುಧಿಷ್ಠಿರ ಮೊದಲಾದವರು ಇದೇ ರೀತಿ ಉತ್ತರಿಸಿದಾಗ ಅವರನ್ನು ದೂರ ಸರಿಯುವಂತೆ ದ್ರೋಣಾಚಾರ್ಯರು ಹೇಳುವರು.

ಅನಂತರ ಅರ್ಜುನನ ಸರದಿ. ಅವನು ಹಕ್ಕಿಯ ಶಿರಸ್ಸಿಗೆ ಗುರಿಯಿಟ್ಟು ಹೇಳಿದನು “ನನ್ನ ಕಣ್ಣಿಗೆ ಹಕ್ಕಿಯ ಶಿರಸ್ಸು ಮಾತ್ರ ಗೋಚರಿಸುತ್ತಿದೆ” ಎಂದು.

ಅನಂತರ ದ್ರೋಣಾಚಾರ್ಯರು ಸಂತೋಷಗೊಂಡು “ನೀನೊಬ್ಬನೇ ಪರೀಕ್ಷೆಯಲ್ಲಿ ಯಶಸ್ವಿಯಾಗಬಲ್ಲೆ. ಗುರಿಯ ಹೊರತು ಬೇರೆ ಯಾವುದನ್ನೂ ಗಮನಿಸದಂತಹ ಏಕಾಗ್ರತೆಯನ್ನು ಸಾಧಿಸಿ ನೀನು ಈ ವಿದ್ಯೆಯಲ್ಲಿ ಸಿದ್ಧಿಯನ್ನು ಪಡೆದಿರುವಿ” ಎಂದು ಅವನನ್ನು ಪ್ರೀತಿಯಿಂದ ಅಪ್ಪಿಕೊಂಡರು.

ಇದರಂತೆ ವಿದ್ಯಾರ್ಥಿಗಳಾದ ನೀವೂ ಏಕಾಗ್ರತೆಯನ್ನು ಸಾಧಿಸಿದರೆ ಮಾತ್ರ ಓದಿನಲ್ಲಿ ಯಶಸ್ವಿಯಾಗುವಿರಿ. ಹೀಗೆಯೇ ಮುಂದೆ ಜೀವನರಂಗದಲ್ಲಿಯೂ ನಮ್ಮ ಗುರಿಯ ಕಡೆಗೆ ಏಕಾಗ್ರತೆಯನ್ನು ಸಾಧಿಸಿದರೆ ಮಾತ್ರ ನಾವು ಯಶಸ್ವಿಯಾಗಬಲ್ಲೆವು. ಇಂದು ವಿದ್ಯಾರ್ಥಿಗಳು ಹಾಗೂ ಇತರರು ಗುರಿಯನ್ನು ಬಿಟ್ಟು ಇತರ ವಿಷಯಗಳಲ್ಲಿ ಹೆಚ್ಚು ಗಮನವನ್ನು ಕೊಡುವುದರಿಂದಲೇ ನಮ್ಮ ಶಿಕ್ಷಣ ಮತ್ತು ನಮ್ಮ ಜೀವನವು ಅಸ್ತವ್ಯಸ್ತವಾಗಿದೆ. ಏಕಾಗ್ರತೆಯಿಂದ ಯಾರು ಪ್ರಯತ್ನಿಸುವುದಿಲ್ಲವೋ ಅವರು ಪ್ರಪಂಚದಲ್ಲಿ ಎಂದೂ ಯಶಸ್ವಿಯಾಗಲಾರರು.

## ಅಭ್ಯಾಸ

### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಅರ್ಜುನನು ಏಕಾಗ್ರತೆಯಿಂದ ಧನುರ್ವಿದ್ಯಾಭ್ಯಾಸವನ್ನು ಪ್ರಾರಂಭಿಸಲು ಪ್ರಚೋದಿಸಿದ ಸನ್ನಿವೇಶ ಯಾವುದು?

____________________

೨. ದ್ರೋಣಾಚಾರ್ಯರು ಯಾರಿಗೆ ಧನುರ್ವಿದ್ಯೆಯನ್ನು ಹೇಳಿಕೊಡುತ್ತಿದ್ದರು?

____________________

೩. ದ್ರೋಣಾಚಾರ್ಯರು ತಮ್ಮ ಶಿಷ್ಯರನ್ನು ಹೇಗೆ ಪರೀಕ್ಷಿಸಿದರು?

____________________

೪. "ಮರ, ಅಲ್ಲಿರುವ ಹಣ್ಣುಗಳು, ಸುತ್ತಮುತ್ತಲೂ ಇರುವ ರಾಜಕುಮಾರರು, ಇವೆಲ್ಲವೂ ಕಾಣಿಸುತ್ತವೆ" ಈ ಮಾತನ್ನು ಯಾರು ಯಾರಿಗೆ ಹೇಳಿದರು?

____________________

೫. ಅರ್ಜುನನು ಕೃತಕ ಹಕ್ಕಿಗೆ ಗುರಿಯಿಟ್ಟು ಏನೆಂದು ಹೇಳಿದನು?

____________________

೬. ನಾವು ಓದಿನಲ್ಲಿ ಯಶಸ್ಸು ಗಳಿಸಬೇಕಾದರೆ ಏನನ್ನು ಸಾಧಿಸಬೇಕು?

____________________

# ೩. ಪೆನ್ಸಿಲ್ ದೊಡ್ಡದೋ? ಪ್ರೀತಿ ದೊಡ್ಡದೋ?

– ಕೃ. ನಾರಾಯಣರಾವ್

ಗಾಂಧೀಜಿಯವರಿಗೆ ಮಕ್ಕಳೆಂದರೆ ಬಲು ಅಕ್ಕರೆ. ಮಕ್ಕಳೂ ಗಾಂಧೀಜಿಯವರನ್ನು 'ಬಾಪೂಜಿ' ಎಂದೇ ಕರೆಯುತ್ತಿದ್ದರು.

ಗಾಂಧೀಜಿ ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನ ರಾಜಕೀಯ ಪ್ರಮುಖರೆನಿಸಿದ್ದ ಮಹದೇವ ರಾನಡೆ ಹಾಗೂ ಇನ್ನಿತರ ಗೆಳೆಯರೊಂದಿಗೆ ಎಲ್ಲಿಗೊ ಪ್ರವಾಸ ಮಾಡುವ ಸಿದ್ಧತೆಯಲ್ಲಿದ್ದರು. ಪ್ರವಾಸದ ಸಮಯದಲ್ಲಿ ತಮಗೆ ಬೇಕಾಗುವ ಸಾಮಾನು ಸರಂಜಾಮುಗಳನ್ನು ಸರಸರನೆ ಚೀಲದಲ್ಲಿ ಭದ್ರವಾಗಿ ತುಂಬಿಕೊಳ್ಳುತ್ತಿದ್ದರು.

ಯಾವುದೋ ವಸ್ತುವಿಗಾಗಿ ತುಂಬಾ ಕಾಲ ತಲೆ ಕೆರೆದುಕೊಳ್ಳುತ್ತಾ ತಡಕಾಡತೊಡಗಿದರು. ಬಹಳ ಹುಡುಕಾಟದಲ್ಲಿಯೇ ಕಾಲ ವ್ಯಯವಾಗುತ್ತಿರುವುದನ್ನು ಕಂಡು, ಸಮಯವನ್ನು ಪೋಲುಮಾಡದ ಬಾಪೂಜಿಗೆ ಬೇಸರವೂ, ಬೇಗುದಿಯೂ ಉಂಟಾಯಿತು.

ಆದರೂ ತಾಳ್ಮೆಗೆಡದೆ ಏನನ್ನೋ ತುಂಬಾ ಕಾಲದಿಂದ ಹುಡುಕುತ್ತಿರುವುದನ್ನು ಕಂಡ ಅವರ ಆತ್ಮೀಯರು ಗಾಂಧೀಜಿಯವರ ಚಲನವಲನವನ್ನು ವೀಕ್ಷಿಸತೊಡಗಿದರು. ಕೊನೆಗೆ ತಡೆಯಲಾರದೆ ರಾನಡೆಯವರೆ ಕೇಳಿದರು.

"ಬಾಪೂಜೀ, ಏನು ಹಾಗೆ ಬಹುಹೊತ್ತಿನಿಂದ ಹುಡುಕುತ್ತಿದ್ದೀರೀ? ಹುಡುಕಾಟದಲ್ಲಿ ನಮ್ಮ ಸಹಾಯವನ್ನು ಸ್ವಲ್ಪ ಪಡೆಯಬಾರದೇ?"

ಗಾಂಧೀಜಿಯವರಿಗೆ ಯಾವುದೇ ಕಾರ್ಯದಲ್ಲಿಯೂ ಸ್ವಸಹಾಯ ಪದ್ಧತಿಯೇ ತುಂಬಾ ಇಷ್ಟ. ಮಹಾದೇವ ರಾನಡೆಯವರತ್ತ ನಗುಮೊಗದಿಂದಲೇ ನೋಡುತ್ತ ಹುಡುಕಾಡುತ್ತಲೇ ಇದ್ದರೂ ಅವರಲ್ಲಿ ಗೆಲುಮುಖ ಕಂಡುಬರಲಿಲ್ಲ.

ಕಡೆಗೆ ಓದುವ ಮೇಜಿನ ಪುಸ್ತಕ ರಾಶಿಯ ಕೆಳಗಡೆ ಅವರು ಹುಡುಕಾಡುತ್ತಿದ್ದ ವಸ್ತು, "ಇಗೋ! ನಾನು ಇಲ್ಲೇ ಇದ್ದೀನಿ!" ಅನ್ನುವಂತೆ ಮುಖ ಮಾತ್ರ ತೋರಿಸಿತು.

ಗಾಂಧೀಜಿ ಈಗ ಗೆಲುಮುಖದಿಂದ, "ತುಂಟಾ! ಇಲ್ಲಿ ಅವಿತುಕೊಂಡಿದ್ದೀಯಾ?" ಎಂದು ಪ್ರಶ್ನಿಸುವಂತೆ ನಿಧಾನವಾಗಿ ಆ ವಸ್ತುವನ್ನು ಹೊರಗೆಳೆದರು. ಅದನ್ನು ಎಲ್ಲರಿಗೂ ತೋರಿಸುತ್ತಾ ಹರ್ಷದೊಂದಿಗೆ ಹೇಳಿದರು.

"ನೋಡಿದಿರಾ! ಇದನ್ನೇ ನಾನು ತುಂಬಾ ಹೊತ್ತಿನಿಂದ ಹುಡುಕುತ್ತಿದ್ದುದ್ದು, ಅಂತೂ ಸಿಕ್ಕಿತಲ್ಲಾ!" ಅನ್ನುತ್ತ ಸಮಾಧಾನದ ಉಸಿರೆಳೆದರು. ಎಲ್ಲರೂ ಆ ವಸ್ತುವನ್ನು ಕಂಡು, ಗಾಂಧೀಜಿಯವರ ಮನೋಭಾವನೆಯ ಬಗ್ಗೆ ದಂಗಾಗಿ ಹೋದರು. ಮಹದೇವ ರಾನಡೆಯವರು ಸಹ ನೆಮ್ಮದಿಯ ಉಸಿರು ಬಿಡುತ್ತಾ ಗಾಂಧೀಜಿಯವರನ್ನು ಪ್ರಶ್ನಿಸಿದರು.

"ಬಾಪೂಜೀ, ಚೋಟುದ್ದದ ಪೆನ್ಸಿಲಿಗಾಗಿ ಇಷ್ಟೊಂದು ಕಾಲವನ್ನು ಪೋಲು ಮಾಡಬೇಕಾಗಿತ್ತಾ?"

ಗಾಂಧೀಜಿಯವರ ನಗುಮುಖದಲ್ಲಿ ಈಗ ಸ್ವಲ್ಪ ಗಾಂಭೀರ್ಯವೂ ಸೇರಿಕೊಂಡಿತ್ತು. ಅವರು ತಮ್ಮ ಬೆರಳುಗಳ ಹಿಡಿಯಲ್ಲಿ ಭದ್ರವಾಗಿ ಹಿಡಿದಿದ್ದ ಪೆನ್ಸಿಲನ್ನೇ ನೋಡುತ್ತ ಹೇಳಿದರು.

"ರಾನಡೆಯವರೇ, ಈ ಪೆನ್ಸಿಲಿನ ಬೆಲೆ ಎಷ್ಟೊಂದು ದೊಡ್ಡದು? ಎಂಬುದು ನಿಮಗಿನ್ನೂ ತಿಳಿದಿಲ್ಲ; ನಾನೊಮ್ಮೆ ಮದ್ರಾಸಿಗೆ ಹೋಗಿದ್ದೆ, ನನ್ನ ಆತ್ಮೀಯರಾದ ನಟರಾಜನ್‌ರವರ ಮನೆಯಲ್ಲಿ ತಂಗಿದ್ದೆ, ನಾನು ಅಲ್ಲಿಂದ ಹಿಂದಿರುಗುವಾಗ ಅವರ ಪುಟ್ಟ ಮೊಮ್ಮಗು ಈ ಪೆನ್ಸಿಲನ್ನು ನನ್ನ ಕೈಯಲ್ಲಿಡುತ್ತಾ ಬಾಪೂಜೀ, ಈ ಪೆನ್ಸಿಲ್ ಕಳೆದುಕೊಳ್ಳಬೇಡಿ, ಇದು ನನ್ನ ಸವಿ ನೆನಪು, ಪ್ರೀತಿಯ ಕಾಣಿಕೆ" ಎಂದು ಹೇಳಿತು.

"ನಾನು ಆ ಪುಟ್ಟ ಚಿನ್ನನಿಗೆ ಮುದ್ದು ಕೊಡುವುದರ ಜೊತೆಗೆ ಮಾತೂ ಕೊಟ್ಟುಬಂದಿದ್ದೇನೆ, ಅಂತಹ ಪೆನ್ಸಿಲ್‌ನ್ನು ನಾನು ಕಳೆದುಕೊಂಡರೆ ನನಗೆಷ್ಟು ದುಃಖವಾಗಬಹುದು ಎಂಬುದನ್ನು ನೀವು ಊಹಿಸಬಲ್ಲಿರಾ? ನೀವು ನನಗೆ ಕೇಳಿದರೆ ಬೇರೊಂದು ಪೆನ್ಸಿಲನ್ನು ತಂದುಕೊಡುತ್ತಿದ್ದಿರೋ ಏನೋ? ಆದರೆ ನನಗೆ ಆ ಮುದ್ದು ಮಗುವಿನ ಪ್ರೀತಿಯನ್ನು ತಂದುಕೊಡಬಲ್ಲಿರಾ? ನೀವೇ ಹೇಳಿ! ಪೆನ್ಸಿಲ್ ದೊಡ್ಡದೋ? ಪ್ರೀತಿ ದೊಡ್ಡದೋ?"

ಕೇಳುತ್ತಿದ್ದವರೆಲ್ಲರೂ ಒಂದೇ ಬಾರಿಗೆ ಮೂಕರಂತಾದರು.

## ಅಭ್ಯಾಸ



### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಮಕ್ಕಳು ಬಾಪೂಜಿ ಎಂದು ಯಾರನ್ನು ಕರೆಯುತ್ತಿದ್ದರು?

________________________________________

೨. ಗಾಂಧೀಜಿಯವರಿಗೆ ತಮ್ಮ ಕೆಲಸಗಳಲ್ಲಿ ಯಾವ ಪದ್ಧತಿ ತುಂಬಾ ಇಷ್ಟವಾಗುತ್ತಿತ್ತು?

________________________________________

೩. ಗಾಂಧೀಜಿಯವರು ಯಾವ ವಸ್ತುವನ್ನು ಹುಡುಕುತ್ತಿದ್ದರು?

________________________________________

೪. ಗಾಂಧೀಜಿಯವರಿಗೆ ಪೆನ್ಸಿಲ್ ನೀಡಿದವರು ಯಾರು?

________________________________________

೫. ಪುಟ್ಟಮಗು ಗಾಂಧೀಜಿಗೆ ಏನೆಂದು ಹೇಳಿತ್ತು?

________________________________________

# ೪. ಸುಗ್ಗಿಯ ಹಾಡು

– ಬಿ.ಎ. ಸನದಿ

ಸುಗ್ಗಿ ಬಂತು ಭಾಗ್ಯ ತಂತು
ರೈತರ ಮನೆ ಬೆಳಗಲು!
ದುಡಿವ ಜನಕೆ, ಅವರ ಮನಕೆ
ಹಿಗ್ಗು ನೀಡಿ ತಣಿಸಲು! ॥೧॥



ಬನ್ನಿರಣ್ಣ ಬನ್ನಿರಕ್ಕ
ಹೊಲಕೆ ಬೇಗ ಹೋಗುವಾ
ಹಿರಿಯ ಕಿರಿಯರೆಲ್ಲ ಕೂಡಿ
ದುಡಿಯಲೆಂದು ಸಾಗುವಾ! ॥೨॥



ಹಂತಿಹಾಡು ಹಾಡಿ ಹಾಡಿ
ರಾತ್ರಿಯೆಲ್ಲ ತಣಿಯುವಾ
ಚಿಕ್ಕೆ ಚಂದ್ರರಿದನು ನೋಡಿ
ನಾಚುವಂತೆ ಕುಣಿಯುವಾ! ॥೩॥



ಊರ ಜನರು ಕರೆದು ಕೂಡಿ
ರಾಶಿಯೂಟ ಮಾಡುವಾ
ಇದ್ದುದನ್ನೆ ಮಮತೆಯಿಂದ
ಎಲ್ಲ ಜನಕೆ ನೀಡುವಾ! ॥೪॥



ರಾಶಿಯನ್ನು ಚೀಲಗಳಲಿ
ತುಂಬಿ ಸಾಲುಗೊಳಿಸುವಾ
ಬಂಡಿಯಲ್ಲಿ ಹೇರಿಕೊಂಡು
ಮನೆಗೆ ತಂದು ಇಳಿಸುವಾ! ॥೫॥



ಆಗ ನಮ್ಮ ಭಾಗ್ಯಲಕ್ಷ್ಮಿ
ಬಂದಳೆಂದು ಹಾಡುವಾ!
ವರುಷವೊಂದು ಹರುಷದಲ್ಲಿ
ಉರುಳಲೆಂದು ಬೇಡುವಾ! ॥೬॥

**ಕೃತಿಕಾರರ ಪರಿಚಯ:**



ಬಾಬಾ ಸಾಹೇಬ ಅಹಮದ್ ಸಾಹೇಬ ಸನದಿಯವರು ೧೯೩೩ ಅಗಸ್ಟ್, ೧೮ ರಂದು ಬೆಳಗಾವಿ ಜಿಲ್ಲೆಯ ಶಿಂದೊಳ್ಳಿ ಗ್ರಾಮದಲ್ಲಿ ಜನಿಸಿದರು. 'ಪ್ರತಿಬಿಂಬ', 'ಧ್ರುವಬಿಂದು','ಆಶಾಕಿರಣ', 'ನೆಲಸಂಪಿಗೆ', 'ತಾಜಮಹಲು', 'ಹಿಮಗಿರಿಯ ಮುಡಿಯಲ್ಲಿ' 'ನಮ್ಮ ಪ್ರೀತಿ' 'ಸೂರ್ಯಪಾನ', 'ಗುಲಾಬಿಗೊಂಚಲು', 'ಗೃಹಪಂಚಮಿ', 'ಜಿಲೇಬಿ ಝುಣ್ ಝುಣ್', 'ಹೊಸಾ ಹೊಸಾ ಹೂವು' (ಕವನಸಂಗ್ರಹ) 'ನೀರಿಲ್ಲದ ನಲ್ಲಿ', 'ಅನುಭವ'(ಕಥಾಸಂಕಲನ) 'ಇಲ್ಲ ಸಲ್ಲುವರು' (ವಚನ ವಿಮರ್ಶೆ) ಮುಂತಾದವು ಇವರ ಪ್ರಮುಖ ಕೃತಿಗಳು.ಶ್ರೇಷ್ಠ ಹೊರನಾಡ ಕನ್ನಡಿಗ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಪಂಪ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಇವರಿಗೆ ಲಭಿಸಿವೆ. ಪ್ರಸ್ತುತ 'ಸುಗ್ಗಿಯ ಹಾಡು' ಪದ್ಯವನ್ನು 'ಹೂವಿನ ಹುಡುಗಿ' ಕವನಸಂಗ್ರಹದಿಂದ ಆರಿಸಿಕೊಳ್ಳಲಾಗಿದೆ.

## ಅಭ್ಯಾಸ

**ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಗಳನ್ನು ಬರೆಯಿರಿ.**

೧. ಸುಗ್ಗಿಯು ಏಕೆ ಬಂದಿತೆಂದು ಸನದಿಯವರು ಹೇಳಿದ್ದಾರೆ?

____________________________________________

೨. ಹೊಲಕ್ಕೆ ಬೇಗ ಹೋಗುವ ಬನ್ನಿರೆಂದು 'ಸುಗ್ಗಿಯ ಹಾಡು' ಪದ್ಯದಲ್ಲಿ ಯಾರು ಯಾರನ್ನು ಕರೆಯುತ್ತಿದ್ದಾರೆ?

____________________________________________

೩. ಕಾಳನ್ನು ಮನೆಗೆ ತಂದು ಇಳಿಸಿದ ಮೇಲೆ ಏನೆಂದು ಹಾಡೋಣವೆಂದು 'ಸುಗ್ಗಿಯ ಹಾಡು' ಕವನದಲ್ಲಿ ಹೇಳಿದ್ದಾರೆ?

____________________________________________

೪. ಸುಗ್ಗಿಯ ಹಾಡು ಪದ್ಯದಲ್ಲಿ ಹೇಳಿರುವಂತೆ ಸುಗ್ಗಿಯ ಕೊನೆಯಲ್ಲಿ ಏನೆಂದು ಬೇಡಬೇಕು?

____________________________________________

೫. ಸುಗ್ಗಿಯ ಕುಣಿತವನ್ನು ಕಂಡು ಯಾರು ನಾಚಬೇಕೆಂದು ಬಯಸುತ್ತಾರೆ?

____________________________________________

## ಭಾಷಾಭ್ಯಾಸ

ಅ) ಸುಗ್ಗಿಯ ಸಂಭ್ರಮವನ್ನು ಬಿಂಬಿಸುವ ಚಿತ್ರಗಳನ್ನು ಸಂಗ್ರಹಿಸಿ, ಆ ಚಿತ್ರಗಳಿಗೆ ಶಿಕ್ಷಕರ ಸಹಾಯದಿಂದ ಶೀರ್ಷಿಕೆಯನ್ನು ಬರೆಯಿರಿ.

ಆ) ಕೆಳಗೆ ಕೊಟ್ಟಿರುವ ಕೆ.ಎಸ್ ನಿಸಾರ್ ಅಹಮದ್‌ರವರ 'ಸಗ್ಗದ ಸಿರಿ ಬಂತು' ಕವನವನ್ನು ರಾಗವಾಗಿ ಹಾಡಿರಿ.

ಸಗ್ಗದ ಸಿರಿಬಂತೋ ನಮ್ಮೂರಿಗೆ
ಸುಗ್ಗಿಯ ಸೊಬಗಿಂದ ನಮ್ಮೂರಿಗೆ
ಸಗ್ಗದ ಸಿರಿಬಂತೋ.......

ಎತ್ತೆತ್ತೆತ್ತಲು ತೆನೆಚೆಲ್ಲಿ ಹಾಲು
ಚಿಲಿಪಿಲಿ ಹೊರಟೀತು ಹಕ್ಕಿಯ ಮೇಳ
ಕಣಕಣದಲ್ಲಿ ಬಂಗಾರ ಜಾಲ
ಬೆರಗಾಗಿ ನಿಂತಿತೊ ಚಲಿಸದೆ ಕಾಲ
ಸಗ್ಗದ ಸಿರಿಬಂತೋ.......

ಅರಿಸಿನ ಕುಂಕುಮ ಮೈಗೆಲ್ಲ ಮೆತ್ತಿ
ಹಸುರುಟ್ಟ ನೆಲದವ್ವ ಮದುವಣ್ಗಿತ್ತಿ
ತೊಟ್ಟಿರೆ ಜರತಾರಿ ಮರಗಳ ನೆತ್ತಿ
ದಿಬ್ಬ ಹೊರಟವೊ ಪಾತರಗಿತ್ತಿ
ಸಗ್ಗದ ಸಿರಿಬಂತೋ.......

ಕೊಟ್ಟಿಗೆ ತುಂಬ ಕರುಗಳ ಅಂಬಾ
ಆಕಳ ಕೆಚ್ಚಲು ಅಮೃತದ ಕುಂಭ!
ಹಟ್ಟಿಯ ಬೆಳಗಿದೆ ತುಂಬಿದ ಚೀಲ
ತೀರಿತೋ ದೇವರೇ, ಬಡವರ ಸಾಲ
ಸಗ್ಗದ ಸಿರಿಬಂತೋ.......

ಚಾವಡಿ ಮುಂದಿಗೆ ಚಪ್ಪರವೆದ್ದು
ಸೇರಿತೊ ಊರೆಲ್ಲ ಗುಜುಗುಜು ಸದ್ದು
ಬೆಳುದಿಂಗಳಿರುಳಲ್ಲಿ ಬಯಲಾಟವಿದ್ದು
ಗೌಡರೆ ನೋಡಲು ಬಂದರು ಖುದ್ದು
ಸಗ್ಗದ ಸಿರಿಬಂತೋ.......

ಹೂಕಾಯಿ ನೀಡುವೆವು ದೀಪವನುರಿಸಿ
ಬಾರಮ್ಮ ಮಾರಮ್ಮ ಬಾ ಗೌರಿಯರಸಿ
ಊರಾಚೆ ಹನುಮ, ಬಾನಮ್ಮ ಹರಸಿ
ಶರಣು ಶರಣೆಂಬೆವು ತುಂಗೆಗೆ ನಮಿಸಿ
ಸಗ್ಗದ ಸಿರಿಬಂತೋ.......

* * *

# ೫. ಎವರೆಸ್ಟ್ ಪರ್ವತವನ್ನು ಹತ್ತುತ್ತೀಯಾ ಮಗು?

– ಎಸ್. ಷಡಕ್ಷರಿ

ಮೇ ೨೯, ೧೯೫೩ ಬಹಳ ಮಹತ್ತರ ದಿನ. ಏಕೆ ಗೊತ್ತಾ? ಅಂದು ಎವರೆಸ್ಟ್ ಪರ್ವತವನ್ನು ತೇನ್‌ಸಿಂಗ್ ಮತ್ತು ಹಿಲರಿ ಹತ್ತಿದ್ದರು. ಆಗ ತೇನ್‌ಸಿಂಗ್‌ಗೆ ಸುಮಾರು ನಲವತ್ತು ವರ್ಷ ವಯಸ್ಸು. ಅವರನ್ನು ಸ್ವಾಗತಿಸಲು, ಅಭಿನಂದಿಸಲು ಬಂದಿದ್ದ ಒಬ್ಬ ಪತ್ರಿಕಾ ವರದಿಗಾರರು ತೇನ್‌ಸಿಂಗ್‌ನನ್ನು ಪ್ರಶ್ನಿಸಿದರು; "ನಲವತ್ತರ ವಯಸ್ಸಿನಲ್ಲಿ ಇಂತಹ ಮಹತ್ ಸಾಧನೆಯನ್ನು ಮಾಡಿ ನಿಂತಿರುವ ನಿಮಗೆ ಹೇಗನಿಸುತ್ತದೆ?" ಮತ್ತು "ಪ್ರೇರಣೆ ಏನು?" ಎಂದರು. ತೇನ್‌ಸಿಂಗರು "ನಾನು ಎವರೆಸ್ಟ್ ಪರ್ವತವನ್ನು ಇಂದು ಹತ್ತಿದೆ ಎಂದು ಯಾರು ಹೇಳಿದರು? ನಾನು ಹತ್ತಿದ್ದು ನನ್ನ ಹತ್ತನೆಯ ವಯಸ್ಸಿನಲ್ಲಿ" ಎಂದರು.

ಆಶ್ಚರ್ಯಗೊಂಡ ಪತ್ರಿಕೆಯವರ ಮುಖ ನೋಡಿ ತೇನ್‌ಸಿಂಗ್‌ರೇ ಮುಂದುವರೆಸಿದರು. ನನ್ನದು ಶೆರ್ಪ ಜನಾಂಗಕ್ಕೆ ಸೇರಿದ ಬಡ ಕುಟುಂಬ. ನಮ್ಮ ಜೀವನಕ್ಕೆ ಆಧಾರ ಇಪ್ಪತ್ತೈದು ಮೇಕೆಗಳು. ಅವುಗಳನ್ನು ಮೇಯಿಸಿಕೊಂಡು ಬರಲು ನಮ್ಮ ತಾಯಿ ಪ್ರತಿದಿನ ನನ್ನನ್ನು ಪರ್ವತದ ತಪ್ಪಲಿಗೆ ತಂದುಬಿಡುತ್ತಿದ್ದರು. ಊಟದ ಬುತ್ತಿ, ಕುಡಿಕೆಯಲ್ಲಿ ನೀರು ಕೊಟ್ಟು "ಇಪ್ಪತ್ತೈದು ಮೇಕೆಗಳನ್ನು ಜಾಗರೂಕತೆಯಿಂದ ಮೇಯಿಸಿಕೊಂಡು ಬಾ" ಎನ್ನುತ್ತಿದ್ದರು. ಹೊರಡುವ ಮುಂಚೆ ಪರ್ವತ ಶ್ರೇಣಿಗಳತ್ತ ಕೈ ತೋರಿಸಿ "ಮಗು! ಅಲ್ಲಿ ಕಾಣುತ್ತಿರುವ ಎವರೆಸ್ಟ್ ಪರ್ವತವನ್ನು ಇದುವರೆಗೂ ಯಾರೂ ಹತ್ತಿಲ್ಲ! ನೀನು ಹತ್ತುತ್ತೀಯಾ ಮಗೂ?" ಎಂದು ಕೇಳಿ ಕೆನ್ನೆ ಸವರಿ ಹೋಗುತ್ತಿದ್ದರು. ಇಡೀ ದಿನ ಮೇಕೆಗಳನ್ನು ಮೇಯಿಸುತ್ತಾ ಒಮ್ಮೆ ಮೇಕೆಗಳತ್ತ, ಮತ್ತೊಮ್ಮೆ ಎವರೆಸ್ಟ್ ಪರ್ವತದತ್ತ ನೋಡುತ್ತಾ, ಆ ಪರ್ವತವನ್ನು ಹತ್ತುವ ಹಗಲುಗನಸು ಕಾಣುತ್ತಾ ಸುತ್ತುತ್ತಿದ್ದೆ. ಅಂದು ಮಾನಸಿಕವಾಗಿ ಹತ್ತಲು ಪ್ರಾರಂಭಿಸಿದೆ. ಇಂದು ದೈಹಿಕವಾಗಿಯೂ ಹತ್ತಿದ್ದೇನೆ. ಈ ಸಾಹಸಕ್ಕೆ "ಯಾರೂ ಎವರೆಸ್ಟ್ ಪರ್ವತವನ್ನು ಹತ್ತಿಲ್ಲ, ನೀನು ಹತ್ತುತ್ತೀಯಾ ಮಗು"? ಎಂದ ತಾಯಿಯ ಮಾತೇ ಸ್ಫೂರ್ತಿ.

ಅಬ್ಬಬ್ಬಾ! ಎಂತಹ ತಾಯಿ, ಎಂತಹ ಮಗ!

"ಮರವನ್ನು ಹತ್ತಬೇಡಾ ಬಿದ್ದರೆ ಪೆಟ್ಟಾದೀತು" ಎಂದು ಹೇಳುವ ಅಕ್ಷರಸ್ಥ ತಾಯಿ–ತಂದೆಯರಾದ ನಾವೆಲ್ಲಿ? "ಎವರೆಸ್ಟ್ ಪರ್ವತವನ್ನೇ ಹತ್ತು" ಎಂದು ಹೇಳಿದ ಆ ಅನಕ್ಷರಸ್ಥ ತಾಯಿ ಎಲ್ಲಿ? "ನೀನು ಸಾಫ್ಟ್‌ವೇರ್ ಎಂಜಿನಿಯರ್ ಆಗಬೇಕು. ಸಂಬಳ ಪಡೆಯಬೇಕು, ಮನೆ ಕಟ್ಟಿಸಬೇಕು, ಕಾರ್ ತೆಗೆದುಕೊಳ್ಳಬೇಕು, ಶ್ರೀಮಂತ ಹೆಣ್ಣನ್ನು ಮದುವೆಯಾಗಬೇಕು, ದೊಡ್ಡ ಬ್ಯಾಂಕ್ ಬ್ಯಾಲೆನ್ಸ್ ಇಡಬೇಕು, ಒಳ್ಳೆಯ ಆಸ್ತಿಪಾಸ್ತಿ ಮಾಡಬೇಕು." ಇದು ನಮ್ಮ ಬೋಧನೆ. ಎವರೆಸ್ಟ್ ಹತ್ತು ಎಂದು ಯಾವ ಹೆತ್ತವರೂ ಹೇಳುವುದಿಲ್ಲ. ಆ ಮಕ್ಕಳೂ ಏರುವುದಿಲ್ಲ. ಆ ಮಕ್ಕಳ ಹೆಸರು ಚರಿತ್ರೆಯ ಪುಟಗಳಲ್ಲಿ ಸೇರುವುದೂ ಇಲ್ಲ! ಮಕ್ಕಳಿಗೆ ಒಳ್ಳೆಯ ವಿದ್ಯಾಭ್ಯಾಸ ಕೊಡೋಣ, ಸಾಧ್ಯವಾದರೆ ಒಂದು ಮಹತ್ತರ ಸಾಧನೆಯನ್ನು ಮಾಡಲು ಸಲಹೆ ಕೊಡೋಣ, ಪ್ರೋತ್ಸಾಹಿಸೋಣ.

**ಕೃತಿಕಾರರ ಪರಿಚಯ:**



ರಮಣಶ್ರೀ ವಿದ್ಯಾಸಂಸ್ಥೆಗಳ ಮುಖ್ಯಸ್ಥರಾದ ಎಸ್. ಷಡಕ್ಷರಿಯವರು ೧೯೪೯ ರಲ್ಲಿ ಜನಿಸಿದರು. ಇವರ ಸ್ಥಳ ನಂಜನಗೂಡು. ಜೀವನ ಸ್ಫೂರ್ತಿ ಉಕ್ಕಿಸುವಂಥ 'ಕ್ಷಣಹೊತ್ತು ಆಣಿಮುತ್ತು' ಎಂಬ ಅಂಕಣದ ಮೂಲಕ ಜನಪ್ರಿಯವಾಗಿದ್ದಾರೆ. ವಿಭಿನ್ನ ಬರಹದ ಅಂಕಣ ಸಂಕಲನ 'ಕ್ಷಣಹೊತ್ತು ಆಣಿಮುತ್ತು' ಐದು ಭಾಗಗಳಲ್ಲಿ ಬಿಡುಗಡೆಯಾಗಿದೆ. ಈ ಗದ್ಯ ಭಾಗವನ್ನು 'ಕ್ಷಣ ಹೊತ್ತು ಆಣಿ ಮುತ್ತು' ಭಾಗ-೨ ರಿಂದ ಆಯ್ದುಕೊಳ್ಳಲಾಗಿದೆ.

## ಅಭ್ಯಾಸ

### ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಎವರೆಸ್ಟ್ ಪರ್ವತವನ್ನು ಮೊದಲ ಬಾರಿಗೆ ಏರಿದವರು ಯಾರು?

----------------------------------------------------

೨. ತೇನ್‌ಸಿಂಗ್‌ನ ತಾಯಿ ತನ್ನ ಮಗನಿಗೆ ಏನೆಂದು ಹೇಳುತ್ತಿದ್ದಳು?

----------------------------------------------------

೩. ತೇನ್‌ಸಿಂಗ್ ಪತ್ರಕರ್ತರಿಗೆ ಹೇಳಿದ ಮಾತುಗಳೇನು?

----------------------------------------------------

೪. ತೇನ್‌ಸಿಂಗ್ ಚಿಕ್ಕಂದಿನಿಂದಲೂ ಯಾವ ಕನಸು ಕಾಣುತ್ತಿದ್ದರು?

----------------------------------------------------

೫. ಈ ಘಟನೆಯನ್ನು ಓದಿದಾಗ ಪೋಷಕರ ಪಾತ್ರ ಏನು ಎಂಬುದನ್ನು ತಿಳಿಸಿರಿ.

----------------------------------------------------

# ೬. ಸರ್ವಜ್ಞನ ವಚನಗಳು

– ಸರ್ವಜ್ಞ

ಅನ್ನವನ್ನಿಕ್ಕುವುದು । ನನ್ನಿಯನು ನುಡಿವುದು
ತನ್ನಂತೆ ಪರರ ಬಗೆವುದು–ಸ್ವರ್ಗತಾ
ಬಿನ್ನಾಣವೆಲ್ಲ ಸರ್ವಜ್ಞ ॥

ಕೊಟ್ಟು ಕುದಿಯಲು ಬೇಡ ಕೊಟ್ಟು ಮರುಗಲುಬೇಡ
ಕೊಟ್ಟು ನಾ ಕೆಟ್ಟೆನೆನಬೇಡ_ಶಿವನಲ್ಲಿ
ಕಟ್ಟಿಹುದು ಬುತ್ತಿ ಸರ್ವಜ್ಞ ॥



**ಕೃತಿಕಾರರ ಪರಿಚಯ:**



ಕನ್ನಡದ ಜನಪ್ರಿಯ ಕವಿಗಳಲ್ಲಿ ಸರ್ವಜ್ಞನು ಒಬ್ಬ. ಕನ್ನಡದಲ್ಲಿ ತ್ರಿಪದಿ ಪ್ರಕಾರ ಇವನ ವಚನಗಳಿಂದ ಖ್ಯಾತವಾಯಿತು. ಈತನ ಕಾಲ ಮತ್ತು ಜೀವನಗಳ ಬಗ್ಗೆ ನಿಖರವಾಗಿ ತಿಳಿದಿಲ್ಲ. ಈತನ ಕಾಲ ಸುಮಾರು ಕ್ರಿ.ಶ. ೧೬೦೦. ಹಾವೇರಿ ಜಿಲ್ಲೆಯ ಅಬ್ಬಲೂರು ಈತನ ಜನ್ಮಸ್ಥಳ. ಈತನ ವಚನಗಳು ಸರ್ವಜ್ಞ ಎಂಬ ಅಂಕಿತದಲ್ಲಿ ರಚನೆಯಾಗಿವೆ.

## ಪದಗಳ ಅರ್ಥ

ಇಕ್ಕು–ನೀಡು, ಹಾಕು, ಕೊಡು;
ಕುದಿ–ಸಂಕಟ, ಸಂತಾಪ, ಅಸೂಯೆ ;
ನನ್ನಿ–ಸತ್ಯ;
ನುಡಿ–ಮಾತು;
ಪರರ–ಬೇರೆಯವರ;
ಬಗೆ–ಅರಿ, ತಿಳಿ;
ಬಿನ್ನಾಣ–ಸೊಗಸು, ಚೆಲುವು, ಸುಂದರ;
ಬುತ್ತಿ– ಮನೆಯಿಂದ ಹೊರಗೆ ಇದ್ದಾಗ ತಿನ್ನಲು ಸಿದ್ಧಪಡಿಸಿದ ಆಹಾರ;
ಮರುಗು–ಕೊರಗು, ಕನಿಕರಿಸು, ತಳಮಳ, ಸಂಕಟ.

## ಅಭ್ಯಾಸ

**ಕೆಳಗಿನ ಪ್ರಶ್ನೆಗಳಿಗೆ ಸೂಕ್ತ ಉತ್ತರ ಬರೆಯಿರಿ.**

೧. ಅನ್ನದ ಮಹತ್ವವನ್ನು ಸರ್ವಜ್ಞನು ವಚನದ ಮೂಲಕ ಹೇಗೆ ತಿಳಿಸಿದ್ದಾನೆ?

________________________________________

೨. ಕೈಲಾಸಕ್ಕೂ ಮಿಗಿಲಾದುದು ಯಾವುದೆಂದು ಸರ್ವಜ್ಞ ತಿಳಿಸಿದ್ದಾನೆ?

________________________________________

೩. ನಮ್ಮ ಬಾಳಿನ ಬುತ್ತಿಯನ್ನು ಕಟ್ಟಿಕೊಡುವವನು ಯಾರೆಂದು ಸರ್ವಜ್ಞನು ಹೇಳಿದ್ದಾನೆ?

________________________________________

೪. ಕೊಡುವುದರ ಬಗೆಗೆ ಸರ್ವಜ್ಞನ ಅಭಿಪ್ರಾಯವೇನು?

________________________________________

೫. ಕೊಟ್ಟು ಕೆಟ್ಟೆನೆಂದು ಮರುಗಬಾರದೆಂದು ಸರ್ವಜ್ಞ ಹೇಳಿದ್ದಾನೆ ಏಕೆ?

________________________________________



# ೭. ರಮಾಬಾಯಿ ಸರಸ್ವತಿ

– ಡಾ. ಉದಯಕುಮಾರ ಇರ್ವತ್ತೂರು





ಮಹಿಳೆಯರ ಸಾಮಾಜಿಕ, ಆರ್ಥಿಕ ಉನ್ನತಿಗಾಗಿ ದುಡಿದವರು ಪಂಡಿತಾ ರಮಾಬಾಯಿ ಸರಸ್ವತಿ. ಉಡುಪಿ ತಾಲ್ಲೂಕು ಮಾಳ ಗ್ರಾಮದ ಗಂಗಾಮೂಲ ಎಂಬ ಸ್ಥಳದಲ್ಲಿ ೧೮೫೮ನೆಯ ಇಸವಿ ಏಪ್ರಿಲ್ ೨೩ರಂದು ಹುಟ್ಟಿದರು. ಇವರ ತಂದೆ ಅನಂತಶಾಸ್ತ್ರಿ ಡೋಂಗ್ರೆ ಮತ್ತು ತಾಯಿ ಲಕ್ಷ್ಮಿಬಾಯಿ. ಅನಂತಶಾಸ್ತ್ರಿ ದಂಪತಿಗಳು ದೇಶ ಪ್ರವಾಸ ಮಾಡುತ್ತಿದ್ದಾಗ ತಲೆದೋರಿದ ಭೀಕರ ಬರಗಾಲದ ಸಮಯದಲ್ಲಿ ನಿಧನರಾದರು. ಮುಂದೆ ರಮಾಬಾಯಿಯವರಿಗೆ ಮದುವೆಯಾಯಿತು. ಆದರೆ ಮದುವೆಯಾಗಿ ಎರಡು ವರ್ಷವಾಗುವುದರೊಳಗೆ ಗಂಡ ಬಿಪಿನ್ ಬಿಹಾರಿ ದಾಸ್ ಕಾಲರಕ್ಕೆ ತುತ್ತಾಗಿ ಮರಣ ಹೊಂದಿದರು. ನಂತರ ರಮಾಬಾಯಿ ಅವರು ವಿದ್ಯಾಭ್ಯಾಸ ಮುಂದುವರಿಸಿ ಸಮಾಜ ಸೇವೆಗೆ ತನ್ನನ್ನು ಅಣಿಗೊಳಿಸಬೇಕೆಂದು ನಿರ್ಧರಿಸಿ ಪುಣೆಗೆ ಬಂದರು.

ಪುಣೆಯಲ್ಲಿ 'ಆರ್ಯ ಮಹಿಳಾ ಸಮಾಜ' ಸ್ಥಾಪಿಸಿದರು. ಶಿಕ್ಷಣ ಪಡೆದು ಜ್ಞಾನವನ್ನು ಮತ್ತು ಆತ್ಮಸ್ಥೈರ್ಯವನ್ನು ಗಳಿಸಿ ಸ್ವಾವಲಂಬಿಗಳಾಗಿ ಬದುಕುವಂತೆ ಹೆಣ್ಣು ಮಕ್ಕಳನ್ನು, ಬಾಲವಿಧವೆಯರನ್ನು ರಮಾಬಾಯಿ ಪ್ರೋತ್ಸಾಹಿಸಿದರು. ಇದಕ್ಕೆ ಪೂರಕವಾಗುವಂತೆ 'ಸ್ತ್ರೀ ಧರ್ಮ ನೀತಿ' ಎನ್ನುವ

ಪುಸ್ತಕವನ್ನು ಪ್ರಕಟಿಸಿದರು. ಹಂಟರ್ ಆಯೋಗದ ಎದುರು ಹಾಜರಾದ ರಮಾಬಾಯಿ ಭಾರತದಲ್ಲಿ ಮಹಿಳೆಯರಿಗೆ ಶಿಕ್ಷಣದ ಆವಶ್ಯಕತೆಯ ಕುರಿತು ಸಮರ್ಥವಾದ ರೀತಿಯಲ್ಲಿ ವಾದ ಮಂಡಿಸಿದರು. ಇದು ಇಂಗ್ಲೆಂಡಿನ ರಾಣಿಯ ಗಮನಕ್ಕೆ ಬರುವ ಮೂಲಕ ಭಾರತದಲ್ಲಿ ಮಹಿಳೆಯರ ಪಾಲಿಗೆ ಶಿಕ್ಷಣ, ವೈದ್ಯಕೀಯ ಸೇವೆ ಮುಂತಾದ ಸವಲತ್ತುಗಳು ದೊರೆಯುವಂತಾಯಿತು.

ರಮಾಬಾಯಿಯವರು ದೇಶ ಸಂಚರಿಸುವ ವೇಳೆ ಚಳಿಯಿಂದ ರಕ್ಷಣೆ ಪಡೆಯಲು ಸೂಕ್ತ ಬಟ್ಟೆಗಳಿಲ್ಲದೆ ಜೀಲಂ ನದೀ ತೀರದ ಮರಳಿನಲ್ಲಿ ಹೂತು ತನ್ನನ್ನು ರಕ್ಷಿಸಿಕೊಳ್ಳಬೇಕಾಗಿ ಬಂತು. ಈ ಸಂದರ್ಭದಲ್ಲಿ ಶೀತಗಾಳಿಯಿಂದ ಬಾಧಿತಳಾಗಿ ಕಿವುಡಿಯಾದರು. ಕ್ರೈಸ್ತ ಸನ್ಯಾಸಿನಿಯರ ಸಹಕಾರ ಪಡೆದು ಇಂಗ್ಲಿಷ್ ವಿದ್ಯಾಭ್ಯಾಸ ಪಡೆಯಲು ಇಂಗ್ಲೆಂಡಿಗೆ ತೆರಳಿದರು.

ಮುಂದೆ ರಮಾಬಾಯಿ ಅಮೇರಿಕಾ ಪ್ರವಾಸ ಕೈಗೊಂಡರು. ಅಮೆರಿಕಾದಲ್ಲಿನ ಶಿಕ್ಷಣ ವ್ಯವಸ್ಥೆ, ಆರೋಗ್ಯ ಸೌಕರ್ಯ, ಉದ್ಯೋಗ ವ್ಯವಸ್ಥೆ, ಸಮಾಜ ಸೇವೆ ಇತ್ಯಾದಿ ಚಟುವಟಿಕೆಗಳನ್ನು ಅಭ್ಯಾಸ ಮಾಡಿದರು. ತಾಯ್ನಾಡಿಗೆ ಮರಳಿದ ನಂತರ ಅವರು ಅಭ್ಯಾಸ ಮಾಡಿದುದನ್ನು ಕಾರ್ಯಗತಗೊಳಿಸಲು ನಿರ್ಧರಿಸಿದರು. ಅವರ ಯೋಜನೆಗಳಿಗೆ ನೂರಾರು ಜನ ಸಹಾಯ ಹಸ್ತ ಚಾಚಿದರು.

ಈ ಸಹಕಾರದಿಂದಾಗಿ 'ರಮಾಬಾಯಿ ಅಸೋಸಿಯೇಶನ್' ಎನ್ನುವ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮೂಲಕ ಸಮಾಜ ಸುಧಾರಕ ಕಾರ್ಯಗಳನ್ನು ನಡೆಸಿದರು. ೧೮೯೦ರಲ್ಲಿ ಸಂಭವಿಸಿದ ಕ್ಷಾಮದ ಪರಿಣಾಮವಾಗಿ ಬಡವರ್ಗದ ಮಹಿಳೆಯರು ಬದುಕುವುದು ಕಷ್ಟಕರವಾಯಿತು. ಇಂತಹ ಸಂದರ್ಭದಲ್ಲಿ ಭಾರತದ ಬುಂದೇಲ್‌ಖಂಡ, ಜಬಲ್‌ಪುರ ಮುಂತಾದೆಡೆ ಸಂಚರಿಸಿ ಮಹಿಳೆಯರಿಗೆ ಆಹಾರ, ಬಟ್ಟೆ ಒದಗಿಸಿದರು. ಅಲ್ಲಿನ ನಿರ್ಗತಿಕರನ್ನು ತನ್ನ ಆಶ್ರಮಕ್ಕೆ ಕರೆತಂದು ಆಸರೆ ನೀಡುವ ಕಾರ್ಯಮಾಡಿದರು. ಮುಂದೆ ಖೇಡ್‌ಗಾಂವ್‌ನಲ್ಲಿ 'ಮುಕ್ತಿ ಸದನ' 'ಕೃಪಾ ಸದನ' ಮತ್ತು 'ಪ್ರೀತಿ ಸದನಗಳು' ರಮಾಬಾಯಿಯವರಿಂದ ಸ್ಥಾಪನೆಗೊಂಡವು. ಈ ಸಂಸ್ಥೆಗಳು ಸಮಾಜದಲ್ಲಿ ಅನಾಥರಿಗೆ ಭರವಸೆಯನ್ನು ಹೊಸ ಬದುಕನ್ನು ನೀಡುತ್ತ ಬಂದವು. ರಮಾಬಾಯಿಯ ತ್ಯಾಗ, ಸೇವೆ ಮತ್ತು ಎದೆಗುಂದದೆ ಗುರಿಯೆಡೆಗೆ ಮುನ್ನಡೆದ ವ್ಯಕ್ತಿತ್ವ ಹಲವರಿಗೆ ಸ್ಫೂರ್ತಿಯಾಯಿತು.

ಇವರಿಗೆ ಕಲ್ಕತ್ತೆಯಲ್ಲಿ ಸಾರ್ವಜನಿಕ ಮನ್ನಣೆಯಾಗಿ ಪಂಡಿತಾ ಮತ್ತು ಸರಸ್ವತಿ ಎಂಬ ಪ್ರಶಸ್ತಿಗಳನ್ನು ನೀಡಲಾಯಿತು. ಇವರ ಸೇವೆಯನ್ನು ಮೆಚ್ಚಿ ಅಂದಿನ ಸರಕಾರ ೧೯೧೯ರಲ್ಲಿ ಇವರಿಗೆ 'ಕೈಸರ್–ಇ–ಹಿಂದ್' ಎನ್ನುವ ಪದವಿಯನ್ನು ನೀಡಿ ಗೌರವಿಸಿತು. ೧೯೨೨ರಲ್ಲಿ ಇವರು ನಿಧನರಾದರು.

**ಕೃತಿಕಾರರ ಪರಿಚಯ:**



ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಇರ್ವತ್ತೂರಿನವರಾದ ಡಾ. ಉದಯಕುಮಾರ್ ಅವರು ೧೯೫೯ ರಲ್ಲಿ ಹುಟ್ಟಿದರು. ಶ್ರೀಯುತರು ಪ್ರಸ್ತುತ ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಸಹ ಪ್ರಾಧ್ಯಾಪಕರು. ಇವರು 'ಅಭಿವೃದ್ಧಿ: ವಾಸ್ತವ ಮತ್ತು ವಿಕಲ್ಪ', 'ಉಡುಪಿ ಜಿಲ್ಲೆ ಆಧುನೀಕರಣ', 'ಅಭಿವೃದ್ಧಿ ಮತ್ತು ಕೈಗಾರಿಕೆಗಳು', 'ವಾಣಿಜ್ಯ ಶಾಸ್ತ್ರ' ಹಾಗೂ 'ಅಭಿವೃದ್ಧಿಯ ಅನೇಕಾಂತವಾದ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ.



## ಅಭ್ಯಾಸ

### ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧) ರಮಾಬಾಯಿ ಸರಸ್ವತಿಯವರು ಸಮಾಜಸೇವೆ ಮಾಡಬೇಕೆಂದು ನಿರ್ಧರಿಸಿದ್ದೇಕೆ?

---------------------------------------------

೨) ರಮಾಬಾಯಿ ಸರಸ್ವತಿಯವರು ಸ್ಥಾಪಿಸಿದ ಸಂಸ್ಥೆಗಳಾವುವು?

---------------------------------------------

೩) ರಮಾಬಾಯಿ ಸರಸ್ವತಿಯವರಿಗೆ ದೊರೆತ ಪ್ರಶಸ್ತಿ ಹಾಗೂ ಪದವಿಗಳಾವುವು?

---------------------------------------------

೪) ರಮಾಬಾಯಿ ಸರಸ್ವತಿಯವರು ಅಮೇರಿಕಾದಲ್ಲಿ ಯಾವ ವಿಷಯಗಳನ್ನು ಕುರಿತು ಅಧ್ಯಯನ ಮಾಡಿದರು?

-----------------------------------------------

೫) ರಮಾಬಾಯಿಯವರು ಪುಣೆಗೆ ಏಕೆ ಬಂದರು?

-----------------------------------------------

೬) ರಮಾಬಾಯಿ ಸರಸ್ವತಿಯವರು ಏಕೆ ಕಿವುಡಿಯಾದರು?

-----------------------------------------------



**ಚೆನ್ನುಡಿ**

"ಜೀವನ ಸುಂದರ ಸ್ವಪ್ನವೂ ಅಲ್ಲ, ಕಹಿ ಬೇವೂ ಅಲ್ಲ; ಬೇವು-ಬೆಲ್ಲಗಳ ಮಿಶ್ರಣ ಅದು. ಅರೆ ಕಹಿ, ಅರೆ ಸಿಹಿ, ಸ್ವಲ್ಪ ನಗು, ಕೊಂಚ ಅಳು; ತುಸು ಕೋಪ, ನಸು ತಾಪ. ನೀನದನ್ನು ನಗುನಗುತ್ತ ನುಂಗಬೇಕು, ನೋವನ್ನು ನಗೆಯಾಗಿ ಪರಿವರ್ತಿಸಿಕೊಳ್ಳಬೇಕು"

– ನಾಡಿಗೇರ ಕೃಷ್ಣರಾಯರು